ನ್ಯಾಸ
ಮಾಲೆ

೨೧

# ಮಾಸ್ತಿ ಕಲ್ಲು

ಚೆನ್ನಕ್ಕ ಎಲಿಗಾರ
ಎಂ. ಎ., ಡಿಪ್. ಇನ್. ಎಪಿ.



ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಎಪ್ರಿಲ್, ೧೯೭೭

ಉಪನ್ಯಾಸ ಗ್ರಂಥಮಾಲೆ

೨೭೧

# ಮಾಸ್ತಿಕಲ್ಲು

ಚೆನ್ನಕ್ಕ ಎಲಿಗಾರ
ಎಂ. ಎ., ಡಿಪ್. ಇನ್. ಎಪಿ.






ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಎಪ್ರಿಲ್, ೧೯೭೭

ಪ್ರಕಾಶಕರು :

**ಸಿ. ಎಸ್. ಕಣವಿ**

ನಿರ್ದೇಶಕರು,

ವ್ಯಾಸಂಗವಿಸ್ತರಣ-ಪ್ರಕಟನ ವಿಭಾಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫೦೦೦ ಪ್ರತಿಗಳು

ಎಪ್ರಿಲ್, ೧೯೭೭



**ಬೆಲೆ : ೨೫ ಪೈಸೆ**

ಮುದ್ರಕರು :

**ಜಿ. ಬಿ. ಮನ್ವಾಚಾರ**

ಸಹಾಯಕ ನಿರ್ದೇಶಕರು

ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ

ಧಾರವಾಡ-೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆ ಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರು ವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರ ಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧ ಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತ ವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿ ಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲ ಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನವಿಟ್ಟು ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೭೦ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕ ಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿ ಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

**ಆರ್. ಸಿ. ಹಿರೇಮಠ**
ಕುಲಪತಿಗಳು

# ಅರಿಕೆ

ಬೆಳವಡಿಯ 'ವೀರರಾಣಿ ಮಲ್ಲಮ್ಮ ಸ್ಮಾರಕ ಹೈಸ್ಕೂಲ'ದ ಆಶ್ರಯದಲ್ಲಿ ದಿನಾಂಕ ೨೯-೧೧-೧೯೭೬ ರಂದು ಜರುಗಿದ ಉಪನ್ಯಾಸದ ಲಿಖಿತರೂಪ ಈ ಪುಸ್ತಿಕೆ.

ಕರ್ನಾಟಕದ ತುಂಬ ಚೆಲ್ಲುವರಿದ ದಾನಶಾಸನ, ಆತ್ಮ ಬಲಿದಾನ ಶಾಸನ, ವೀರಮರಣ ಶಾಸನಗಳ ಅಭ್ಯಾಸ ತುಂಬ ಉಪಯುಕ್ತವಾದುದು. ಇವುಗಳಲ್ಲಿ ಪತಿಯ ಮರಣಾನಂತರ ಅಗ್ನಿಯನ್ನು ಪ್ರವೇಶಿಸಿದ ಮಹಾಸಾಧ್ವಿಯರ ಸ್ಮಾರಕ ಶಿಲೆಗಳಾಗಿ ಮಾಸ್ತಿಕಲ್ಲುಗಳು ನಮ್ಮ ಶಾಸನ ಪ್ರಪಂಚದ ವಿಶಿಷ್ಟ ಪ್ರಕಾರವಾಗಿ ಬೆಳೆದು ಬಂದಿವೆ. ಈ ಶಾಸನಗಳನ್ನು ಮುಖ್ಯವಾಗಿಟ್ಟುಕೊಂಡು ಕಾವ್ಯ, ವಿದೇಶಿ ಪ್ರವಾಸಿಗಳ ಬರೆವಣಿಗೆ, ಜಾನಪದ ಸಾಹಿತ್ಯ, ಮುಂತಾದವುಗಳ ನೆರವಿನಿಂದ ಮಾಸ್ತಿ ಪರಂಪರೆ, ಆಚರಣೆ, ಮೊದಲಾದವುಗಳನ್ನು ನಿರೂಪಿಸಿದ್ದೇನೆ. ಈ ಪ್ರಯತ್ನದಿಂದ ಮಾಸ್ತಿ ಮತ್ತು ಮಾಸ್ತಿಕಲ್ಲುಗಳ ಬಗೆಗೆ ಓದುಗರಲ್ಲಿ ಸ್ಥೂಲ ಕಲ್ಪನೆ ಮೂಡಿದರೂ ನನ್ನ ಶ್ರಮ ಸಾರ್ಥಕವೆಂದು ಬಗೆಯುತ್ತೇನೆ.

ಪ್ರಥಮಬಾರಿ ಶಾಸನಗಳ ವಿವರವಾದ ಅಧ್ಯಯನಕ್ಕೆ ನನ್ನನ್ನು ಹುರಿಗೊಳಿಸಿದವರು ಇಂದಿನ ಉಪಕುಲಪತಿಗಳು, ನನ್ನ ಗುರುಗಳೂ ಆದ ಡಾ. ಆರ್. ಸಿ. ಹಿರೇಮಠರವರು ಇದಕ್ಕೆ ಸಂಪೂರ್ಣ ಪ್ರೋತ್ಸಾಹ ಒದಗಿಸಿಕೊಟ್ಟವರು ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥರೂ ನನ್ನ ಇನ್ನೊಬ್ಬ ಗುರುಗಳೂ ಆದ

ಡಾ. ಎಮ್. ಎಸ್. ಸುಂಕಾಪುರವರು ಕಗ್ಗಲ್ಲಾಗಿದ್ದ ನನಗೆ ಸಂಸ್ಕಾರ ನೀಡಿ ಮೂರ್ತಿರೂಪಕ್ಕೆ ತಂದ ಶಿಲ್ಪಿ, ನನ್ನ ಮತ್ತೊಬ್ಬ ಗುರುಗಳಾದ ಡಾ. ಎಮ್. ಎಮ್. ಕಲಬುರ್ಗಿಯವರು. ಇವರೆಲ್ಲರ ತುಂಬು ಹೃದಯದ ಸಹಕಾರಕ್ಕೆ ನಾನು ಚಿರಋಣಿ. ಈ ೨೩೩ನೆಯ ವ್ಯಾಸಂಗ ವಿಸ್ತರಣಾ ಶಿಬಿರದ ಉಪನ್ಯಾಸ ಮಾಲಿಕೆಯಲ್ಲಿ ಭಾಗವಹಿಸಲು ನನಗೆ ಅವಕಾಶ ನೀಡಿದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಾಶನ ವಿಭಾಗದ ನಿರ್ದೇಶಕರಾದ ಶ್ರೀಯುತ ಚೆನ್ನವೀರ ಕಣವಿಯವರಿಗೂ, ಆತ್ಮೀಯತೆಯಿಂದ ನನ್ನ ಉಪನ್ಯಾಸಕ್ಕೆ ಪ್ರೋತ್ಸಾಹ ನೀಡಿದ ಸಹಾಯಕ ನಿರ್ದೇಶಕರಾದ ಶ್ರೀ ಎಲ್. ಎಂ. ಗುಡ್ಡೀನವರಿಗೂ ನನ್ನ ಹೃತ್ಪೂರ್ವಕ ವಂದನೆಗಳು. ಬೆಳವಡಿಯ ವೀರರಾಣಿ ಮಲ್ಲಮ್ಮ ಸ್ಮಾರಕ ಹೈಸ್ಕೂಲ' ಸಮಿತಿಯ ಚೇರಮನ್‌ರಾದ ಪಾಟೀಲರಿಗೂ, ಹಿರಿಯರಾದ ಜಕಾತಿ ಗುರುಗಳಿಗೂ, ಶಾಲೆಯ ಅಧ್ಯಾಪಕ ವೃಂದದವರಿಗೂ ಬೆಳವಡಿಯ ಪುರಪ್ರಮುಖರಿಗೂ ನನ್ನ ವಂದನೆಗಳು. ಈ ಶಾಸನಾಧ್ಯಯನಕ್ಕೆ ನನ್ನ ಮನವನ್ನು ಹದಗೊಳಿಸಿದ ನನ್ನ ಪರಮಪೂಜ್ಯ ದೊಡ್ಡಪ್ಪನವರಾದ ಲಿಂ. ಬಸಪ್ಪನವರು ಎಲಿಗಾರವರನ್ನು ನಾನು ಇಲ್ಲಿ ನೆನೆಯದಿರಲಾರೆ.

ಧಾರವಾಡದ ಮೃತ್ಯುಂಜಯ ಕಾಮರ್ಸ ಕಾಲೇಜಿನ ಪ್ರಿನ್ಸಿಪಾಲ ಎಮ್. ಸಿ. ಶೆಟ್ಟರವರು, ನನ್ನ ಕಾಲೇಜಿನ ಎಲ್ಲ ಅಧ್ಯಾಪಕರುಗಳ ಪ್ರೋತ್ಸಾಹವೇ ಈ ಪುಸ್ತಕ ರಚನೆಗೆ ಪ್ರೇರಕ ಶಕ್ತಿ ಕಿತ್ತೂರಿನ ವಸ್ತುಸಂಗ್ರಹಾಲಯದಲ್ಲಿದ್ದ ಮಾಸ್ತಿಕಲ್ಲುಗಳ

ಪ್ರತಿ ಚಿತ್ರವನ್ನು ತೆಗೆದುಕೊಳ್ಳಲು ಅನುಮತಿ ನೀಡಿದ ಮೈಸೂರಿನ ಪ್ರಾಚ್ಯವಸ್ತು ಸಂಗ್ರಹಾಲಯದ ಡೈರಕ್ಟರವರಿಗೆ ಕೃತಜ್ಞತೆಗಳು. ಮಾಸ್ತಿಕಲ್ಲುಗಳ ಸುಂದರ ಚಿತ್ರಗಳನ್ನು ತೆಗೆದುಕೊಡುವಲ್ಲಿ ಸಹಾಯಕರಾದ ಸಾಲಿ ಸಹೋದರರಿಗೆ ವಂದನೆಗಳು. ಇವರೆಲ್ಲರ ಸಹಕಾರಕ್ಕೆ ವಂದನೆಗಳು.

**ಚೆನ್ನಕ್ಕ ಎಲಿಗಾರ**

# ಪರಿವಿಡಿ

# ೧. ಕರ್ನಾಟಕದ ಶಾಸನಗಳು

ಶಾಸನಗಳು ನಮ್ಮ ನಾಡಿನ ಅಮೂಲ್ಯ ಆಸ್ತಿ. ಗತ ಕಾಲದ ಪ್ರಾಮಾಣಿಕ ಧ್ವನಿಗಳಾದ ಇವು ಪ್ರಾಚೀನ ಇತಿಹಾಸವನ್ನು ಪುನರ್ರಚಿಸುವಲ್ಲಿ ಪ್ರಮುಖವಾದ ಪಾತ್ರವಹಿಸುತ್ತವೆ.

ಭಾರತದೇಶದ ಸಂಸ್ಕೃತಿಯ ವ್ಯಾಪಕವಾದ ಹಿನ್ನೆಲೆಯಲ್ಲಿ ಕರ್ನಾಟಕ ತನ್ನದೇ ಆದ ಒಂದು ಸ್ಥಾನವನ್ನು ಪಡೆದುಕೊಂಡಿದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳ ಅಡಿಪಾಯಗಳ ಮೇಲೆ ನಿಂತ ಈ ಸಂಸ್ಕೃತಿ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಹೀಗೆ ಹಲವಾರು ರಂಗಗಳಲ್ಲಿ ಪ್ರವಹಿಸುತ್ತ ಬಂದಿದೆ. ಈ ಎಲ್ಲ ರಂಗಗಳನ್ನು ಪ್ರತಿನಿಧಿಸುತ್ತ ನಿಂತಿವೆ ಕರ್ನಾಟಕದ ಶಾಸನಗಳು.

ಕರ್ನಾಟಕದಲ್ಲಿ ಈ ವರೆಗೆ ಕಣ್ಣಿಗೆ ಬಿದ್ದ ಶಾಸನಗಳ ಸಂಖ್ಯೆ ಸುಮಾರು ೨೫,೦೦೦. ಅನೇಕ ಭಾಷೆ, ಅನೇಕ ಲಿಪಿಗಳಲ್ಲಿ ಮೂಡಿನಿಂತ ಈ ಸಂಪತ್ತಿಗೆ ಸಮಸ್ತ ಭಾರತದಲ್ಲಿ ಸಂಖ್ಯಾದೃಷ್ಟಿಯಿಂದ ತಮಿಳಿನ ತರುವಾಯದ, ಸತ್ವದೃಷ್ಟಿಯಿಂದ ಸಂಸ್ಕೃತದ ತರುವಾಯದ ಸ್ಥಾನ ಸಲ್ಲುತ್ತದೆ.

ಕರ್ನಾಟಕದಲ್ಲಿ ಪ್ರಥಮಬಾರಿಗೆ ಬರವಣಿಗೆಯ ರೂಪಕ್ಕಿಳಿದುವು ಸಾಮ್ರಾಟ ಅಶೋಕನ ಶಿಲಾಲಿಪಿಗಳು. ಬ್ರಹ್ಮಗಿರಿ, ಜಟಿಂಗರಾಮೇಶ್ವರ, ಸಿದ್ಧಾಪುರ, ಮಸ್ಕಿ, ಗವಿಮಠ,

ಮತ್ತು ಪಾಲ್ಕೀಗುಂಡ— ಇವು ಅಶೋಕನ ಶಾಸನಗಳಿರುವ ಊರುಗಳು. ಇವುಗಳ ಭಾಷೆ ಪ್ರಾಕೃತ, ಲಿಪಿ ಬ್ರಾಹ್ಮಿ, ವಿಷಯ ಮಾನವಧರ್ಮ ನಿರೂಪಣೆ. ಇಲ್ಲಿಂದ ಪ್ರಾರಂಭವಾಗಿ ಮುಂದೆ ೫ ಶತಮಾನಗಳ ಕಾಲ ಅಂದರೆ ಸಾತವಾಹನಕಾಲದ ವರೆಗೆ ಪ್ರಾಕೃತಭಾಷೆ ತನ್ನ ಪರಿಧಿಯನ್ನು ಬೆಳೆಸಿಕೊಳ್ಳುತ್ತಲೇ ಇತ್ತು. ಈ ಮಧ್ಯದಲ್ಲಿ ಮೂಡಿಬಂದುವು ಚುಟುವಂಶದ ಸಾತಕರ್ಣಿಯ ಮಳವಳ್ಳಿ ಶಾಸನ, ಸಾತವಾಹನ ಸಿರಿಪುಳು ಮಾಯಿಯ ವಸ್ಯಾಕದೋನಿ ಶಾಸನ, ಕದಂಬ ವಂಶದ ಶಿವಸ್ಕಂದ ವರ್ಮನ ಮಳವಳ್ಳಿ ಶಾಸನ, ಸಾತಶಿವಖದನಾಗಸಿರಿಯ ಬನವಾಸಿಯ ಶಾಸನ, ಕದಂಬ ಮಯೂರವರ್ಮನ ಚಂದ್ರವಳ್ಳಿ ಶಾಸನ, ಪಲ್ಲವ ಶಿವಸ್ಕಂದವರ್ಮನ ಹಿರೇಹಡಗಲಿಯ ಶಾಸನ ಈ ಆರು ಪ್ರಾಕೃತ ಶಾಸನಗಳಲ್ಲದೇ ವಡಗಾವ-ಮಾಧವಪುರ. ಸನ್ನತಿ ಮೊದಲಾದ ಗ್ರಾಮಗಳ ಪ್ರಾಕೃತ ಶಾಸಗಳು ನಮಗೆ ಲಭಿಸಿವೆ.

ಮುಂದೆ ಕದಂಬರ ಕಾಲಕ್ಕೆ ಪ್ರಾಕೃತದ ಪ್ರಭಾವವನ್ನು ಇಳಿಮುಖಗೊಳಿಸಿ ಸಂಸ್ಕೃತ ಅದರ ಪೀಠವನ್ನಲಂಕರಿಸಿತು. ಈ ಸುಮಾರಿಗೆ ಕನ್ನಡ ಭಾಷೆಯೂ ಕರ್ನಾಟಕದ ಶಾಸನಗಳಿಗೆ ಮಾಧ್ಯಮವಾಯಿತು ಆಮೇಲೆ ಅಡಿಯಿಟ್ಟ ತಮಿಳು, ತೆಲುಗು, ಮಲಿಯಾಳ, ಮರಾಠಿ ಭಾಷೆಯ ಶಾಸನಗಳು ಸಂಖ್ಯಾವೃಷ್ಟಿ ಯಿಂದ ತೀರಕಡಿಮೆ.

ಕರ್ನಾಟಕದಲ್ಲಿ ದೊರೆತ ಪ್ರಥಮ ಕನ್ನಡ ಶಾಸನ ಕ್ರಿ. ಶ. ೫ ನೆಯ ಶತಮಾನದ ಕದಂಬ ಕಾಕುತ್ಸ ವರ್ಮನ

ಹಲ್ಮಿಡಿ ಶಾಸನ ಇಲ್ಲಿಂದ ಬೆಳೆಯುತ್ತ ಬಂದ ಕನ್ನಡ ಶಾಸನಗಳು ನೃಪತುಂಗನ ಕಾಲಕ್ಕೆ ಹೊಸ ಅವಸ್ಥೆಯನ್ನು, ಆಮೇಲೆ ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಕಾಲಕ್ಕೆ ಇನ್ನೊಂದು ಅವಸ್ಥೆಯನ್ನು, ವಿಜಯನಗರ ಕಾಲಕ್ಕೆ ಮತ್ತೊಂದು ಅವಸ್ಥೆಯನ್ನು ಪಡೆದು ಸಾಗಿಬಂದವು. ಸ್ವರೂಪದೃಷ್ಟಿಯಿಂದ ಪ್ರತಿಯೊಂದು ಶಾಸನವನ್ನು ಸ್ತುತಿ, ವಿಷಯ, ಫಲಶ್ರುತಿ ಎಂದು ವಿಭಾಗಿಸಬಹುದಾದರೂ ಮುತ್ತಗಿ ಶಾಸನವು

'ರಾಜಾವಳೀ ಚ ಕರ್ತಾರಃ ಸ್ಥಾನಗೌರವಮೇವ ಚ ।
ದತ್ತಿಶ್ಚ ತತ್ಫಲಂ ಚೈವ ಶಾಸನಂ ಪಂಚಲಕ್ಷಣಂ'[೧] ॥

ಎಂದು ಶಾಸನದ ಪಂಚಲಕ್ಷಣಗಳನ್ನು ಸೂಚಿಸುತ್ತದೆ.

## ೨. ಶಾಸನದ ಪ್ರಕಾರಗಳು

ಶಾಸನಗಳ ಸ್ವರೂಪ ಮತ್ತು ಪ್ರಕಾರಗಳನ್ನು ಕುರಿತು ಕೌಟಿಲ್ಯನ ಅರ್ಥಶಾಸ್ತ್ರ, ಶುಕ್ರಾಚಾರ್ಯನ ಶುಕ್ರನೀತಿಸಾರ ಮತ್ತು ಯಾಜ್ಞವಲ್ಕ್ಯ ಸಂಹಿತೆಗಳಲ್ಲಿ ಉಲ್ಲೇಖಗಳು ಕಂಡುಬರುತ್ತವೆ.

ಕರ್ನಾಟಕದ ಶಾಸನಗಳನ್ನು ಈ ರೀತಿ ವರ್ಗೀಕರಿಸುವುದು ಸೂಕ್ತವೆಂದು ತೋರುತ್ತದೆ:

೧. ದಾನ ಶಾಸನಗಳು
೨. ಆತ್ಮ ಬಲಿದಾನದ ಶಾಸನಗಳು

೩. ವೀರಮರಣದ ಶಾಸನಗಳು

೪. ಇತರ ಶಾಸನಗಳು

**೧. ದಾನಶಾಸನಗಳು :** ಕರ್ನಾಟಕದ ಶಾಸನ ಸಮೂಹದಲ್ಲಿ ದಾನಶಾಸನಗಳದೇ ಸಿಂಹಪಾಲು. ಧಾರ್ಮಿಕ ಜೀವನವೇ ದಾನಶಾಸನಗಳ ಪ್ರೇರಕ ಶಕ್ತಿಯಾಗಿದ್ದಿತು. ದೇಶವ ನ್ನಾಳುವ ರಾಜ, ಅವನ ಸಾಮಂತ, ಮಂಡಳೇಶ್ವರ, ಮತ್ತು ಅಧಿಕಾರಿಗಳು ಇವುಗಳನ್ನು ಬರೆಸಿದವರು. ದೇವರ ಪೂಜೆ, ಆಚಾರ್ಯರ ಉದರಪೋಷಣೆ, ಕೆರೆ, ಕಾಲುವೆ, ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ ಮೊದಲಾದ ದೃಷ್ಟಿಯಿಂದ ಬರೆಯಿಸಿದ ದಾನದಾಖಲೆಗಳಿವು.

**೨. ಆತ್ಮಬಲಿದಾನದ ಶಾಸನಗಳು:** ತನ್ನನ್ನು ಪೋಷಿಸಿದ ಒಡೆಯನ ಪ್ರೀತಿಗಾಗಿ ಅವನು ಮಡಿದ ನಂತರ ಆವನಿಗೆ ಸ್ವರ್ಗ ವನ್ನು ಹಾರೈಸಿ ಕೈಕೊಳ್ಳುವ ಆತ್ಮಬಲಿದಾನದ ಸ್ಮಾರಕಗಳಿವು. ಸ್ವರ್ಗಸಂಪಾದನೆ ಇದರ ಪ್ರಮುಖ ಉದ್ದೇಶ ಈ ಆತ್ಮ ಬಲಿದಾನ ಧಾರ್ಮಿಕ ಮತ್ತು ಲೌಕಿಕ ಎಂದು ಎರಡು ಬಗೆ ಯಾಗಿದೆ.

i) ಧಾರ್ಮಿಕ ಆತ್ಮ ಬಲಿದಾನ : ಮುಕ್ತಿಗೋಸುಗ ದೇವರ ಹೆಸರಿನಲ್ಲಿ ಅಗ್ನಿಪ್ರವೇಶ, ಜಲಪ್ರವೇಶ ಊರ್ಧ್ವಪತನ ಗಳ ಮೂಲಕ ಪ್ರಾಣೋತ್ಕ್ರಮಣ ಮಾಡಿಕೊಳ್ಳುವುದು ಧಾರ್ಮಿಕ ಆತ್ಮಬಲಿದಾನ. ಜಯಸಾಗರ್ ಎನ್ನುವವ ಮಕರ ಮಾಸದ ದಿನದಲ್ಲಿ ಬೆಂಕಿಯ ಕೊಂಡವನ್ನು ಹೊಕ್ಕ ವಿಷಯ

ಒಂದು ಶಾಸನದಲ್ಲಿದೆ[೨] ಕೋಣವತ್ತಿಯ ಕೇತನೆಯ ಮಗ ಬೊಪ್ಪನು ತಿಳವಳ್ಳಿಯಲ್ಲಿ ಸೂರ್ಯಗ್ರಹಣ ಕಾಲದಲ್ಲಿ ಅಗ್ನಿ ಪ್ರವೇಶದಿಂದ ಪ್ರಾಣತ್ಯಾಗಮಾಡಿ ಸೂರ್ಯಲೋಕ ಪಡೆದ ನೆಂದು ತಿಳವಳ್ಳಿಯ ಶಾಸನ ತಿಳಿಯಪಡಿಸುತ್ತದೆ.[೩] ಇಂತಹ ಅನೇಕ ಉದಾಹರಣೆಗಳು ಅಗ್ನಿಪ್ರವೇಶದ ಸಂದರ್ಭವನ್ನು ತಿಳಿಯ ಪಡಿಸಿದರೆ ಕ್ರಿ. ಶ ೧೦೬೮ ರಲ್ಲಿ ಚಾಲುಕ್ಯದೊರೆ ಸೋಮೇಶ್ವರ ಮಹಾಜ್ವರ ಪೀಡಿತನಾಗಿ ತುಂಗಭದ್ರಾನದಿಯಲ್ಲಿ ಮುಳುಗಿ ಪ್ರಾಣ ಬಿಟ್ಟದ್ದು ಜಲಪ್ರವೇಶಕ್ಕೊಂದು ನಿದರ್ಶನ.[೪]

ಎತ್ತರವಾದ ಸ್ಥಳಗಳಿಂದ ಬಿದ್ದು ಪ್ರಾಣೋತ್ಕ್ರಮಣ ಮಾಡಿಕೊಳ್ಳುವುದು ಧಾರ್ಮಿಕ ಆತ್ಮಬಲಿದಾನದ ಇನ್ನೊಂದು ವಿಧಾನ. ಕರ್ನಾಟಕದ ಶಾಸನಗಳಲ್ಲಿ ಇದರ ಉಲ್ಲೇಖ ಬರದಿದ್ದರೂ ಬ್ರಹ್ಮಶಿವ ಈ ವಿಧಾನವನ್ನು ಖಂಡಿಸುವುದರಿಂದ ಅಂದಿನ ಕಾಲದಲ್ಲಿ ಇದು ರೂಢಿಯಲ್ಲಿರುವ ಸಾಧ್ಯತೆಯಿದೆ.

ii) ಲೌಕಿಕ ಆತ್ಮಬಲಿದಾನ : ದೇವರ ಹೆಸರಿನಲ್ಲಿ ಪ್ರಾಣತ್ಯಾಗ ಮಾಡುವ ಈ ಸಂಪ್ರದಾಯ ಮುಂದೆ ದೇವ ಸಮಾನರಾದ ವ್ಯಕ್ತಿಗಳ ಮರಣ ಪ್ರಸಂಗದಲ್ಲಿ ಪ್ರಾಣತ್ಯಾಗ ಮಾಡಿಕೊಳ್ಳಲು ದಾರಿಮಾಡಿಕೊಟ್ಟಿತು. ಇದು ಲೌಕಿಕ ಆತ್ಮ ಬಲಿದಾನ. ಇದು ಒಡೆಯನಿಗಾಗಿ ಆಳು ಕೈಕೊಂಡಲ್ಲಿ 'ಕೀಳ್ಗುಂಟೆ, ವೇಳೆವಾಳಿ, ಗರುಡರು, ಲೆಂಕ' ಎನ್ನಿಸಿಕೊಂಡರೆ, ಪತಿಯ ಮರಣದಲ್ಲಿ ಸತಿ ಕೈಕೊಳ್ಳುವ ಆತ್ಮಬಲಿದಾನ ಸಹ ಗಮನವೆನಿಸಿತು.

ಪ್ರಾಚೀನ ಕರ್ನಾಟಕದಲ್ಲಿ ಆತ್ಮಬಲಿಯನ್ನು ಪರ್ಿಸುವುದಕ್ಕೆ ಬಳಸಿದ ಪ್ರಥಮ ಪಾರಿಭಾಷಿಕ ಪದ ಕೀಳ್ಗುಂಟಿ ಕೀಳ್ಗುಣಿ. ಕೀಳ್ಗುಂಟೆ, ಕೀಳ್ಗುಂತೆ ಎಂಬ ಹಲವಾರು ರೂಪಗಳಲ್ಲಿ ಸಿಗುವ ಈ ಪದದ ನಿಜರೂಪ ಇನ್ನೂ ಸ್ಪಷ್ಟವಾಗಿಲ್ಲ. ತಮ್ಮನ್ನು ಸಾಕಿ ಸಲುಹಿದ ಒಡೆಯ ಮರಣಹೊಂದಿದಾಗ ಅವನ ಸಮಾಧಿಯ ಕೆಳಗಡೆ ಮುಂದಾಗಿ ಬಂದ ವ್ಯಕ್ತಿಯನ್ನು ಹೂಳುತ್ತಿರಬೇಕು. ಗಂಗರಾಜ ನೀತಿಮಾರ್ಗ ಪೆರ್ಮಾನಡಿ ಮರಣಹೊಂದಿದಾಗ ಅವನ ಮನೆಮಗ ಅಗರಯ್ಯನೆಂಬವ ನೀತಿಮಾರ್ಗನಿಗೆಕೀಳ್ಗುಂಟಿ ಯಾದುದನ್ನು ಉಲ್ಲೇಖಿಸುವ ದೊಡ್ಡಹುಂಡಿಯ ಶಾಸನ ಇದಕ್ಕೆ ಉತ್ತಮ ನಿದರ್ಶನ. ಈ ಬಲಿದಾನ ಕೆಲವೊಮ್ಮೆ ಒಡೆಯನ ಶವದೊಡನೆ ಅಗ್ನಿಪ್ರವೇಶದ ಮುಖಾಂತರವೂ ನಡೆದ ಸಂದರ್ಭಗಳಿವೆ.

ಕೀಳ್ಗುಂಟಿ ಪದದ ಬದಲು 'ವೇಳೆವಾಳಿ' ಎಂಬ ಪದ ಆಮೇಲೆ ಪ್ರಚಾರಕ್ಕೆ ಬಂದಿತು. 'ವೇಳೆ' ಎಂಬುದು ಪ್ರತಿಜ್ಞಾ ಸೂಚಕ ಪದವಾದರೆ 'ವೇಳೆಗೊಳ್' ಎಂಬುದು ಪ್ರತಿಜ್ಞಾ ಪರಿ ಪಾಲನೆಯನ್ನು ಸೂಚಿಸುತ್ತದೆ. 'ವೇಳೆವಾಳಿ' ಎಂಬುದು ಈ ಪ್ರತಿಜ್ಞೆಯನ್ನು ಪರಿಪಾಲಿಸುವ ವ್ಯಕ್ತಿಯನ್ನು ಸೂಚಿಸುತ್ತದೆ. ಇವರನ್ನು 'ವೇಳೆವಡಿಚ','ಬೇಳೆವಡಿಚ',ಎಂದೂ ಕರೆದುದುಂಟು. 'ಮೇಯ್ಗಾಪುಮಾ ವೇಳೆಗೊಂಡಿರ್ದತ್ಯುಗ್ರ ಭಟರ್ಕಳುಂ' ಎಂಬ ವಡ್ಡಾರಾಧನೆಯ ಮಾತಾಗಲಿ, 'ಅನುಜರ್ ನಾಲ್ವ ರುಮಂ ಧರ್ಮನಂದನಂ ವೇಳೆಗೊಂಡು ಕಾವಂ' ಎಂಬ ಪಂಪ ಭಾರತದ ಮಾತಾಗಲಿ ಇದರ ಪ್ರಾಚೀನತಮ ಆಚರಣೆಯನ್ನು

ತಿಳಿಸುತ್ತನೆ. ಇದು ಅಗ್ನಿಪ್ರವೇಶದ ಮಾರ್ಪಾಂತರವೂ ಜರುಗ ಬಹುದಿತ್ತು. ಕ್ರಿ. ಶ. ೯ ನೆಯ ಶತಮಾನದಲ್ಲಿ ಚಾಳುಕ್ಯ ರಾಜನೊಬ್ಬನಿಗೆ ವೇಳೆವಾಳಿಯಾಗಿ ಅಗ್ನಿಪ್ರವೇಶಿಸಿದ ಶಂಭು ವನ್ನು ಶಾಸನವೊಂದು ಹೊಗಳುತ್ತದೆ.[೭] ಜೀವಸಂಬೋಧನೆ ಯಲ್ಲಿ 'ಉರಿವ ಕೆಂಡಕ್ಕೆ ಪಂದ ವೇಳೆವಡಿಚಗಂ' ಎಂಬ ಉಲ್ಲೇಖ ಕಂಡುಬರುತ್ತದೆ

ವೇಳೆವಾಳಿಗೆ ಪ್ರತಿಯಾಗಿ ಹೊಯ್ಸಳರ ಕಾಲಕ್ಕೆ 'ಗರುಡ' ಎಂಬ ಪದ ಬಳಕೆಗೊಂಡಿತು ಆತ್ಮಬಲಿಯನ್ನರ್ಪಿಸುವ ಈ ಗರುಡರು ಸ್ವಾಮಿನಿಷ್ಠೆಗೆ ಪ್ರಸಿದ್ಧರು. ಹೊಯ್ಸಳ ವೀರ ಬಲ್ಲಾಳನಿಗೆ ಗರುಡರಾಗಿದ್ದ ಕುವರಲಕ್ಷ್ಮ ಮತ್ತು ಅವನ ಮಡದಿ ಸುಗ್ಗಲೆ ಇಲ್ಲಿ ಉಲ್ಲೇಖಯೋಗ್ಯರೆನಿಸಿದ್ದಾರೆ. ತನ್ನ ಮಡದಿ ಮತ್ತು ಸಾವಿರ ಲೆಂಕರೊಡನೆ ಕುವರಲಕ್ಷ್ಮ ಒಡೆಯನಿ ಗಾಗಿ ಪ್ರಾಣತ್ಯಾಗಮಾಡುತ್ತಾನೆ. ಗರುಡಪದ್ಧತಿಯ ವಿಧಿ ವಿಧಾನ ಇನ್ನೂ ಗೌಪ್ಯವಾಗಿ ಉಳಿದುಕೊಂಡಿವೆ.

ಕೀಳ್ಗುಂಟೆ, ವೇಳೆವಾಳಿ ಅಥವಾ ಗರುಡ ಇವು ಯಾವುದೇ ವ್ಯಕ್ತಿಯ ಅಥವಾ ವ್ಯಕ್ತಿಗಳ ಬಲಿದಾನವನ್ನು ಸೂಚಿಸಿದರೆ, 'ಲೆಂಕವಾಳಿ' ಎನ್ನುವುದು ವಂಶಪಾರಂಪರ್ಯ ಬಲಿದಾನವನ್ನು ಸೂಚಿಸುವಂತಿದೆ ಅನಂತನಾಥ ಪುರಾಣ ಲೆಂಕರ ಸಂಪೂರ್ಣ ವಿವರಣೆಯನ್ನು ಕೊಡುತ್ತದೆ.

ಮರಣಹೊಂದಿದ ಪತಿಯೊಡನೆ ಸಹಗಮನ ಹೊಂದುವ ಸತಿಪದ್ಧತಿಯೂ ಲೌಕಿಕ ಆತ್ಮಬಲಿದಾನವೇ. ಒಂದರ್ಥದಲ್ಲಿ ಇದು

ಸ್ತ್ರೀ ಆಚರಿಸುವ ವೇಳೆವಾಳಿತನ. ಈ ಪದ್ಧತಿ ಭಾರತದ ತುಂಬ ಅಂತೆಯೇ ಕರ್ನಾಟಕದ ತುಂಬ ಪ್ರಚಾರದಲ್ಲಿದ್ದಿತು.

ಹೀಗೆ ಒಡೆಯನು ಮಡಿದಾಗ ಕೈಕೊಳ್ಳುವ ಆತ್ಮ ಬಲಿದಾನಗಳಲ್ಲದೇ ತಮ್ಮ ಒಡೆಯನಿಗೆ ಪುತ್ರಸಂತಾನವಾಗ ಬೇಕೆಂಬ ಅಭಿಲಾಷೆಯಿಂದಲೋ, ಯುದ್ಧದಲ್ಲಿ ಅವನಿಗೆ ಜಯ ಲಭಿಸಲೆಂದೋ, ಗುಣಪಡಿಸಲಾಗದ ಅವನ ವ್ಯಾಧಿ ಗುಣವಾಗ ಲೆಂದೋ ಅನೇಕಸಲ ಸ್ವಾಮಿನಿಷ್ಠ ವ್ಯಕ್ತಿಗಳು ಆತ್ಮಬಲಿದಾನ ಗೈಯುತ್ತಿದ್ದರು ಇದು ಸಿಡಿತಲೆ ರೂಪದಲ್ಲಿ ಇಲ್ಲವೇ ಅಗ್ನಿ ಪ್ರವೇಶ ರೂಪದಲ್ಲಿ ಜರುಗುತ್ತಲಿದ್ದಿತು. ಹೀಗೆ ಮೇಲಿನ ಎಲ್ಲ ಧಾರ್ಮಿಕ ಮತ್ತು ಲೌಕಿಕ ಸಂದರ್ಭಗಳಲ್ಲಿ ಮಡಿದವರ ಸ್ಮಾರಕ ವಾಗಿ ನಿಲ್ಲಿಸುವ ಶಿಲೆಗಳೇ ಆತ್ಮಬಲಿದಾನದ ಶಾಸನಗಳು.

೩. **ವೀರಮರಣದ ಶಾಸನಗಳು** : ಧಾರ್ಮಿಕ ಮತ್ತು ಲೌಕಿಕ ಆತ್ಮಬಲಿದಾನದಿಂದ ಮುಕ್ತಿ ಕೈ ಸಾರುವುದೆಂಬ ನಂಬಿಕೆಯ ಜೊತೆಗೆ ವೀರಮರಣವನ್ನು ಪಡೆಯುವುದರಿಂದಲೂ ಮುಕ್ತಿ ದೊರಕುವುದೆಂಬ ಮೌಲ್ಯವೂ ಸಮಾಜದಲ್ಲಿ ಪ್ರಸಾರ ವಾಯಿತು. ಇದರಿಂದ ಧರ್ಮಕ್ಕಾಗಿ ದೇಹತ್ಯಾಗ ಮಾಡಿದ ಧರ್ಮವೀರನ ಸ್ಥಾನ, ದೇಶಕ್ಕಾಗಿ ದೇಹತೆತ್ತ ಯುದ್ಧವೀರನ ಸ್ಥಾನ ಒಂದೇ ಮಾಲಿಕೆಯಲ್ಲಿ ಬರತೊಡಗಿದವು.

'ದ್ವಾ ವಿಮೌ ಪುರುಷೌಲೋಕೇ ಸೂರ್ಯಮಂಡಲ ಭೇದಿಸಾ
ಪರಿವ್ರಾಟ ಯೋಗಯುಕ್ತಶ್ಚ ರಣೇಚಾಭೀಮುಖೇ ಹತಃ'[೧೦] ॥

ಸೂರ್ಯಮಂಡಲವನ್ನು ಭೇದಿಸಲು ಸಮರ್ಥರಾದವರು ಈ ಲೋಕದಲ್ಲಿ ಇಬ್ಬರೇ: ಯೋಗಸಾಮ್ರಾಜ್ಯದಲ್ಲಿ ನಿಜದ ನಿಲವನ್ನು ಸಂಪಾದಿಸಿದ ಸಂನ್ಯಾಸಿಯೊಬ್ಬ, ಯುದ್ಧರಂಗದಲ್ಲಿ ವೀರವನ್ನು ಬೆಳಗಿದ ಯುದ್ಧವೀರನೊಬ್ಬ ಎಂದು ಈ ಮಹಾಭಾರತ ಪದ್ಯದ ಅರ್ಥ. ಇವರ ಹಿನ್ನೆಲೆಯಲ್ಲಿ:

'ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ' ॥[೧೧]

ಎಂಬ ಯುದ್ಧಮಂತ್ರ ಜನತೆಯ ಮನದಲ್ಲಿ ಬಲವಾಗಿ ಬೇರೂರಿತು. 'ಗೆಲ್ದವನಂ ಶ್ರೀವಧು ಪತ್ತುಗುಂ, ಮಡಿದವನಂ ದೇವಾಂಗನಾನೀಕಮುತ್ಸವದಿಂದುಯ್ಗುಂ' ಎಂಬುದು ಅವರನ್ನು ಯುದ್ಧವೀರರನ್ನಾಗಿ ಮಾಡತೊಡಗಿತು. 'ಅರ್ಥಮುಳ್ಳನಂ ಈವುದು. ಜೀವಮುಳ್ಳನಂ ಇರಿವುದು' ಎಂಬ ಧ್ಯೇಯಗಳು ಪ್ರಜೆಗಳಿಗೆ ಆದರ್ಶಗಳಾಗತೊಡಗಿದವು. ಈ ವೀರಮರಣದ ಸಂದರ್ಭಗಳನ್ನು ಕವಿ ರನ್ನನು :

'ತುರುಗೋಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ ನೆಂಟನೆಡಱೊಳೂರಱಿವಿನೊಳಂ
ತಱಿಸಂದು ಗಂಡುತನಮನೆ
ನೆಱಪದವಂ ಗಂಡನಲ್ಲನೆಂತುಂ ಪಂಡಂ' ॥[೧೨]

ಎಂದು ತಿಳಿಸುತ್ತಾನೆ. ಇದೇ ಧಾಟಿಯಲ್ಲಿ 'ತುರುಹುಯ್ಯಲನು ಕೇಳಿ ಕಿವಿಯೊಳುದಕವ ಕೊಂಡೊಡೆ ಅದು ಪಂಚಮಹಾಪಾತಕ,' 'ಸಲಹಿದೊಡೆಯನ ಜೋಳವಾಳಿಗೆ ತಲೆಯ ಮಾರುವು

ದೊಂದು ಪುಣ್ಯದ ಬೆಳಸು' ಎಂಬ ಹೇಳಿಕೆಗಳು ಕನ್ನಡ ಕಾವ್ಯ[೧೩]ಗಳಲ್ಲಿ ಮೂಡುತ್ತ ಬಂದಿವೆ. ಈ ಆದರ್ಶವನ್ನು ನಂಬಿದ ಕನ್ನಡಿಗರು—

'ವರನ್ತೇಜಸ್ವಿನೋ ಮೃತ್ಯುರ್ನತು ಮಾನಾವಖಣ್ಡನಂ
ಮೃತ್ಯುಸ್ತತ್ಕ್ಷಣಿಕೋ ದುಃಖಮಾನಭಂಗನ್ದಿನೇದಿನೇ'॥[೧೪]

ಎಂಬ ವೀರಸಿದ್ಧಾಂತವನ್ನು ನಂಬಿ ನಡೆದರು. ಹೆಂಡಿರು ತಮ್ಮ ಮೈಮೇಲೆ ಮಣಿಕನಕವಸ್ತುವಿಭೂಷಣಗಳನ್ನು ಆಶಿಸದೇ ಪತಿಗಳ ಮೈಮೇಲೆ ಶಸ್ತ್ರವ್ರಣಗಳನ್ನು ಆಶಿಸತೊಡಗಿದಾಗ ವೀರಜೀವನ ಇನ್ನೂ ಪುಟಗೊಂಡಿತು. ಇದರ ಫಲವಾಗಿ 'ಆಯುಧಯುಕ್ತನಂ ಮೆಚ್ಚದರಾರ್, ಆಭರಣದೊಳಗೊಂದಾಭರಣ ಸುರಗಿ' ಎಂಬಷ್ಟರ ಮಟ್ಟಿಗೆ ವೀರತ್ವ ಪ್ರಕಟಗೊಳ್ಳತೊಡಗಿತು. ಹೀಗೆ ಶೌರ್ಯವನ್ನು ಪ್ರಕಟಿಸಿ ಯುದ್ಧರಂಗದಲ್ಲಿ ಮರಣಹೊಂದಿದರೆ ವೀರಸ್ವರ್ಗ ಸಿಗುವುದೆಂಬ ಭಾವನೆ ಜನರಲ್ಲಿ ಬಲವಾಗಿ ಬೇರೂರಿತು. ವಿವೇಕ ಚಿಂತಾಮಣಿಯಲ್ಲಿ ಬರುವ ವೀರಸ್ವರ್ಗದ ಕಲ್ಪನೆ ಇಂತಿದೆ:

"ವೈದ್ಯುತವೆಂಬ ನಾಲ್ಕನೆಯ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ ಸುರಪನಾಣತಿಯ ಅಪ್ಸರರೆನಿಸುವ ವೀರದೇವತೆಗಳಿಹರಲ್ಲಿಗೀ ನರಲೋಕದ ಕಮರಿ, ಅಗ್ನಿ, ಜಲ, ಸಂಗ್ರಾಮ, ಗೋಗ್ರಹಾದಿಗಳಲ್ಲಿ ಪರಾಕ್ರಮದಿಂದಳಿದವರನಲ್ಲಿಯ ದೇವಕನ್ನಿಕೆಯರನಂತ ಸಂಭ್ರಮದಿಂ ಮಣಿಖಚಿತ ವಿಮಾನದಿಂದೊಯ್ವರದೇ ವೀರಸ್ವರ್ಗಕ್ಕುಂ"॥[೧೫]

ಇಂತಹ ವೀರಸ್ವರ್ಗವೇರಿದವನ ಹೆಸರಿನಲ್ಲಿ 'ವೀರಗಲ್ಲು' ನಿಲ್ಲಿಸಿ ಅವನ ಕುಟುಂಬದ ಸಂರಕ್ಷಣೆಯನ್ನು ಆ ನಾಡಿನ ರಾಜನೋ, ಮೇಲಾಧಿಕಾರಿಯೋ ನೋಡಿಕೊಳ್ಳುತ್ತಿದ್ದನು. ಅವರ ಮನೆತನಕ್ಕೆ, ನೆತ್ತರುಕೊಡುಗೆ, ರುಧಿರಮಾನ್ಯ, ಕಲ್ನಾಡು, ರಕ್ತಕೊಡುಗೆ ಮುಂತಾದ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ಆತನ ಬಂಧು ಬಾಂಧವರು ಆತನ ಸ್ಮಾರಕವಾದ ವೀರಗಲ್ಲಿಗೆ ಪೂಜೆ ಪುನಸ್ಕಾರಗಳು ಸಲ್ಲುವಂತೆ ನೋಡಿಕೊಳ್ಳುತ್ತಿದ್ದರು. ಸೋವಿಯನಾಯಕನೆಂಬವ ಸ್ವಾಮಿಕಾರ್ಯಕ್ಕಾಗಿ ರಣಾಂಗಣದಲ್ಲಿ ಕಾದು ಸುರಲೋಕವನ್ನು ಪಡೆದುಕೊಂಡಾಗ ಅವನ ಮಡದಿ ಮಾಚಿಯಕ್ಕ 'ಮಣಿರತುನಖಚಿತಮಪ್ಪ ಮಣಿಮಯ ಮಂಟಪ'ದಲ್ಲಿ ವೀರಗಲ್ಲನ್ನಿರಿಸಿದ ಪ್ರಸಂಗವೊಂದು ಅರಸಿಕೆರೆಯ ಶಾಸನದಲ್ಲಿ[೧೬] ಕಂಡುಬರುತ್ತದೆ. ಈ ವೀರಗಲ್ಲುಗಳಿಗೆ ಕಳಶ, ಕನ್ನಡಿ, ಹೂವು, ದೀಪ, ಪಂಚವಾದ್ಯಗಳ ಗೌರವ ಸಲ್ಲುತ್ತಿತ್ತು.

ಮಡಿದ ವೀರನ ಚರಿತ್ರೆ ನಾಡವರ ಮನದಲ್ಲಿ ಅಚ್ಚಳಿಯದ ಕಥೆಯಾಗಿ ಉಳಿಯುತ್ತಿತ್ತು. ಆತನ ಶೌರ್ಯ ಧೈರ್ಯಗಳ ಪ್ರತೀಕವಾಗಿ ವೀರಗೀತೆಗಳು ರಚಿತವಾಗಿ ಜನತೆಯ ಮನಸ್ಸನ್ನು ವೀರರಸದ ಚಿಲುಮೆಯನ್ನಾಗಿ ಮಾಡುತ್ತಿದ್ದವು. 'ವೀರನ ಸಾವು ಕತೆಯಾಗಿ ಪಱಿದುದು ಮೂಱುಮೀ ಲೋಕದೊಳ್' ಎಂಬ ಶಾಸನ ವಾಕ್ಯವೇ ಇದಕ್ಕೆ ನಿದರ್ಶನ. ಜನತೆಯ ಭಾವುಕತೆ ಯುದ್ಧವೀರನನ್ನು ದೇವತೆಯ ರೂಪದಲ್ಲಿ ಕಾಣತೊಡಗಿದಾಗ ವೀರಗಲ್ಲುಗಳೇ ವೀರರ ಗುಡಿಗಳಾಗಿ ಮಾರ್ಪಟ್ಟಿದ್ದನ್ನು ಇಲ್ಲಿ ಅರಿಯಬಹುದು.

೪ **ಇತರ ಶಾಸನಗಳು :** ಯುದ್ಧದಲ್ಲಿಯ ಜಯಸಂಪಾದನೆಯ ಪ್ರತೀಕವಾಗಿ ನಿಲ್ಲಿಸಿದ ಶಾಸನಗಳು ಇಲ್ಲಿ ಪ್ರಮುಖವಾದುವು, ಸಮಾಧಿಮರಣಕ್ಕೆ ತಮ್ಮನ್ನರ್ಪಿಸಿದ ಜೈನಮತೀಯರ ಸ್ಮಾರಕಶಿಲೆಗಳಾದ ನಿಷಧಿಕಲ್ಲುಗಳೂ, ಮೂರ್ತಿಯ ಮೇಲಿನ, ದೇವರಿಗೆ ಕಾಣಿಕೆ ನೀಡಿದ ವಸ್ತುಗಳ ಮೇಲಿನ ಬರವಣಿಗೆಗಳೂ' ಅನೇಕ ಬಗೆಯ ಯಂತ್ರ ಮಂತ್ರದ ಕಲ್ಲುಗಳೂ ಈ ವಿಭಾಗಕ್ಕೆ ಒಳಪಡುತ್ತವೆ.

## ೩. ಮಾಸ್ತಿ-ಮಾಸ್ತಿಪರಂಪರೆ

ಲೌಕಿಕ ಆತ್ಮಬಲಿದಾನವೆನಿಸಿದ ಕೀಲ್ಗುಂಟೆ (=ವೇಳೆವಾಳಿ=ಗರುಡ) ಲೆಂಕವಾಳಿಗಳನ್ನು ಪ್ರಧಾನವಾಗಿ ಪುರುಷರೇ ಆಚರಿಸುತ್ತಿದ್ದುದು ಇತಿಹಾಸದುದ್ದಕ್ಕೂ ಕಂಡುಬರುತ್ತಿದೆ. ಸ್ತ್ರೀಯರು ಆಚರಿಸಿದ ಇಂತಹ ಒಂದೆರಡು ಉದಾಹರಣೆಗಳು ಸಿಗುತ್ತಿದ್ದರೂ ಸಹಗಮನದಂತಹ ರಾಜಮಾರ್ಗ ಅವರ ಕಣ್ಣು ಮುಂದೆ ತೆರೆದುನಿಂತಿದ್ದಿತು. ಪತಿನಿಷ್ಠೆಗಾಗಿ ಅವನ ಮರಣಾನಂತರ ಅಗ್ನಿಪ್ರವೇಶಮಾಡುವುದೇ ಮಹಾಸತಿ. ಈ ಮಹಾಸತಿ ಪದದ ಸಂಕ್ಷಿಪ್ತರೂಪ 'ಮಾಸ್ತಿ'.

ಪರಲೋಕದ ಕಲ್ಪನೆಯುಲ್ಲಿ ನಂಬಿಕೆಯುನ್ನಿಟ್ಟ ಜನತೆ, ಮಡಿದ ವ್ಯಕ್ತಿಯ ಜೊತೆಯಲ್ಲಿ ಅವನಿಗಿಷ್ಟವಾದ ಕೆಲವು ವಸ್ತುಗಳನ್ನು ಕಳುಹಿಸಿಕೊಡುವ ಸಂಪ್ರದಾಯವನ್ನು ರೂಢಿಸಿಕೊಂಡರು. ಈ



ಮಾಸ್ತಿಕಲ್ಲು : ಕಿತ್ತೂರಿನ ವಸ್ತುಸಂಗ್ರಹಾಲಯದಿಂದ



ಮಾಸ್ತಿಕಲ್ಲು : ಕಿತ್ತೂರಿನ ವಸ್ತುಸಂಗ್ರಹಾಲಯದಿಂದ

ಭಾವನೆ ಮಾಸ್ತಿ ಪರಂಪರೆಗೆ ದಾರಿಮಾಡಿಕೊಟ್ಟಿತು. ಭಾರತೀಯ ಮಟ್ಟದಲ್ಲಿ ವ್ಯಾಪಕವಾಗಿ ಹರಡಿದ್ದ ಈ ಮೌಲ್ಯ ಒಂದು ಕಾಲಕ್ಕೆ ಪ್ರಪಂಚದ ಅನೇಕ ಭಾಗಗಳಲ್ಲಿ ವ್ಯಾಪಿಸಿತ್ತು. ಪುರುಷನ ಪ್ರಿಯವಸ್ತುಗಳಲ್ಲಿ ಪತ್ನಿಯೂ ಒಬ್ಬಳು. ತನ್ನ ಮರಣಾನಂತರ ತನ್ನ ಪತ್ನಿ ತನ್ನಿಂದ ಅಗಲಿರಬಾರದೆಂಬ ಭ್ರಮೆಯಿಂದಲೋ, ಅಥವಾ ಅವಳು ಮತ್ತೊಬ್ಬನ ವಶವರ್ತಿಯಾಗಿರಬಾರದೆಂಬ ಭಾವನೆಯಿಂದಲೋ, ತನ್ನೊಡನೆ ಅವಳನ್ನು ಕರೆದೊಯ್ಯುವಂತೆ ಮಾಡಿದ ವ್ಯವಸ್ಥೆಯಿದು. ಸತಿಯಾಗಬಯಸಿದವಳು ಪರಲೋಕದಲ್ಲಿರುವ ತನ್ನ ಪತಿಯ ಸಾನ್ನಿಧ್ಯ ಬಯಸಿ ಸಹಗಮನ ಕೈಕೊಳ್ಳುತ್ತಿದ್ದಳು. ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಪತಿಯೊಡನೆ ಸಹಭಾಗಿನಿಯಾದ ಅವಳು ಸಹಗಮನ ಮುಖೇನ ಅಗಲಿದ ಪತಿಯನ್ನು ಪಡೆಯುವಳೆಂಬ ಕಲ್ಪನೆ ತುಂಬ ಪ್ರಾಚೀನವಾದುದು.

ಇದು ಮೂಲತ ಬ್ರಾಹ್ಮಣರಲ್ಲಿ ಹೆಚ್ಚು ಪ್ರೋತ್ಸಾಹಗೊಂಡ ಪರಂಪರೆಯಾದರೂ ಕಾಲಕ್ರಮೇಣ ಈ ಪದ್ಧತಿಯನ್ನು ಅವರು ಸಂಪೂರ್ಣವಾಗಿ ನಿಷೇಧಿಸಿದರು. ಮುಂದೆ ಇದು ಕ್ಷತ್ರಿಯರಲ್ಲಿ ಬಲವಾದ ಒಂದು ಪರಂಪರೆಯಾಯಿತು. ಪತಿಯ ಮರಣಾನಂತರ ಜೀವಿಸಿದ ವಿಧವೆಗೆ ಸಮಾಜದಲ್ಲಿ ಅತ್ಯಂತ ನಿಕೃಷ್ಟಸ್ಥಾನ ದೊರೆಯುತ್ತಿತ್ತು. ವಿಧವೆಯಾದವಳು ಯಾವ ಆಸ್ತಿ ಹಕ್ಕು ಬಾಧ್ಯತೆಗಳಿಗೆ ಹಕ್ಕುದಾರಳಾಗಿರುತ್ತಿರಲಿಲ್ಲ. ಸಮಾಜದಲ್ಲಿ ಜರುಗುವ ಮದುವೆ ಮುಂತಾದ ಶುಭಕಾರ್ಯಗಳಿಗೆ ಅವಳು ಹೋಗಲು ನಿಷೇಧವಿದ್ದಿತು. ಹೀಗಾಗಿ ಸಮಾಜದ

ನಿಂದೆಗೊಳಗಾದ ವಿಧವೆ ಸಾಮಾಜಿಕವಾಗಿ, ಆರ್ಥಿಕವಾಗಿ, ಶೋಚನೀಯ ಸ್ಥಿತಿಯಲ್ಲಿ ಬದುಕಲಿಚ್ಛಿಸದೇ ಪತಿಯೊಡನೆ ಮುತ್ತೈದೆಯಾಗಿ ಹಿಂಬಾಲಿಸುವುದರಲ್ಲಿಯೇ ಪರಮ ಪುರುಷಾರ್ಥವನ್ನು ಕಂಡುಕೊಂಡಿದ್ದಳು.

ಸಹಗಮನಕ್ಕೆ ಹಿನ್ನೆಲೆಯಾದ ಒಂದು ಸುಂದರ ದೃಶ್ಯವನ್ನು ಪಂಪಭಾರತ ಹೀಗೆ ಕೊಡುತ್ತದೆ-ಯುದ್ಧಕ್ಕೆ ಹೊರಟ ಒಬ್ಬ ವ್ಯಕ್ತಿ ನಾಳೆ ಮನೆಗೆ ಮರಳಿ ಬಾರದೇ ದೇವಲೋಕದ ಕನ್ನಿಕೆಯರೋಲಗದ ಮಧ್ಯದೊಳಿರುವೆನೆಂದು ನುಡಿಯಲು ಆತನ ಪತ್ನಿ ಪತಿಯನ್ನಗಲಿ ಬದುಕಲಿಚ್ಛಿಸದೆ—

"ತಾಂ ಗಡ ನಾಳೆ ಪೋಗಿ ದಿವಿಜಾಂಗನೆ
ಯೊಳ್ತೊಡರ್ದಿರ್ಪನಿಲ್ಲಿವಾ
ಣ್ದಾಂ ಗಡವಿರ್ಪೆನಂತನಿತು ಬೇಳೆನೆ
ಮುನ್ನಮೆ ಪೋಗಿ ನಲ್ಮೆಗೆ
ಲ್ಲಂಗೊಳೆ ದೇವಲೋಕದೊಳಧೀಶನ
ನಾನಿದಿರ್ಗೊಳ್ವೆನೇವೊಸ
ಗ್ಗರ್ಂಗಳೊಳಿರ್ಪ ದೇವಡಿತಿ ತೊೞ್ತಿರೊಳಱ್ತಿಯ
ನಾಗಲೀವೆನೋ"೧೭ ॥

ಎನ್ನುತ್ತಾಳೆ. ಸ್ವರ್ಗಕ್ಕೆ ಅವನಿಗಿಂತ ಮುಂದುಹೋಗಿ ದೇವಸ್ತ್ರೀಯರಿಗಿಂತ ಮೊದಲು ಆತನನ್ನು ತಾನೇ ವಶವರ್ತಿ ಮಾಡಿಕೊಳ್ಳುವೆನೆಂಬ ಅವಳ ಛಲದಲ್ಲಿ ಸಹಗಮನದ ಧ್ವನಿಯಿದೆ.

ಈ ಸಹಗಮನದ ಆಚರಣೆ ಎರಡು ವಿಧವಾಗಿದ್ದಿತು. ಒಂದು ಸಹಗಮನ, ಮತ್ತೊಂದು ಅನುಗಮನ. ಪತಿ ಮಡಿದ ನಂತರ ಅವನ ಶವದೊಡನೆ ಚಿತೆ ಏರುವ ಪದ್ಧತಿ ಸಹಗಮನ. ಇದನ್ನು ಸಾಮಾನ್ಯವಾಗಿ ಎಲ್ಲ ಕಾಲಕ್ಕೂ ಎಲ್ಲ ಸಂದರ್ಭ ಗಳಲ್ಲಿಯೂ ಅನುಸರಿಸುತ್ತಿದ್ದರು ಮತ್ತೊಂದು, ಪತಿ ಎಲ್ಲಿಯೋ ದೂರದ ಪ್ರದೇಶದಲ್ಲಿ ಮರಣಹೊಂದಿದಾಗ ಅವನ ಶವ ಸಿಗದೇ ಹೋಗಲು, ಅವನ ಪ್ರಿಯವಾದ ಒಂದು ವಸ್ತುವಿನೊಡನೆ ಚಿತೆಯನ್ನೇರುವುದು ಅನುಗಮನ ಈ ಪದ್ಧತಿ ಅತ್ಯಂತ ವಿರಳ ವಾದರೂ ಬೆಳತೂರು ಶಾಸನ[೧೮] ಈ ಪದ್ಧತಿಯ ಸುಂದರ ಚಿತ್ರವೊಂದನ್ನು ಕೊಡುತ್ತದೆ ಇನ್ನು 'ಮಾಸ್ತಿಪರಂಪರೆ'ಯ ವಿಷಯವನ್ನು ನೋಡಬಹುದು

ಒಂದು ಕಾಲಕ್ಕೆ ಭಾರತದ ಬಹುಭಾಗವನ್ನು ವ್ಯಾಪಿಸಿದ್ದ ಈ ಪರಂಪರೆಯ ಇತಿಹಾಸ ಪ್ರಾಚೀನತಮವಾಗಿದೆ. ಪ್ರಾಚೀನ ಜನತೆ ಈ ಪದ್ಧತಿಯನ್ನು ಅನೇಕಸಲ ನಿಷೇಧಿಸಿದ್ದರೂ ಅನೇಕ ಸಲ ಪ್ರೋತ್ಸಾಹಿಸಿದವರೂ ಉಂಟು. ಅಗ್ನಿಪುರಾಣ, ಮಹಾ ಭಾರತದ ಕೆಲವು ಭಾಗಗಳು ಈ ಪದ್ಧತಿಯನ್ನು ಉಲ್ಲೇಖಿಸಿ ದರೆ ಸ್ಮೃತಿಕಾರರೂ, ಪುರಾಣಕರ್ತೃಗಳೂ ಇದನ್ನು ಎತ್ತಿ ಹಿಡಿದಿದ್ದಾರೆ. ಅಗ್ನಿಪುರಾಣ 'ಮಡಿದ ಗಂಡನ ಜೊತೆ ಬೆಂಕಿ ಯಲ್ಲಿ ಬಿದ್ದು ಮರಣಹೊಂದಿದ ಸತಿ, ಪತಿಸಹಿತ ಸ್ವರ್ಗ ಸೇರುತ್ತಾಳೆ' ಎಂದು ಹೇಳುತ್ತದೆ. ಬೃಹಸ್ಪತಿ 'ಪತಿಯ ಸುಖ ದಲ್ಲಿಯೂ ದುಃಖದಲ್ಲಿಯೂ ಪತ್ನಿಯು ಸಹಭಾಗಿನಿಯಾಗಿದ್ದಲ್ಲಿ ಅವನ ಮರಣಾನಂತರ ತಾನೂ ಮೃತ್ಯುವನ್ನಪ್ಪುತ್ತಾಳೆ.

ಆಗಲೇ ನಿಜವಾಗಿ ಆಕೆ ಅವನಲ್ಲಿ ಅನುರಕ್ತಳು' ಎಂದಿದ್ದಾನೆ.
ಆದರೂ ಶಾಸ್ತ್ರಜ್ಞರು ತಾರುಣ್ಯಾವಸ್ಥೆಯನ್ನು ಪಡೆಯದ
ಪತ್ನಿಯರನ್ನು, ಗರ್ಭಿಣಿ ಮಹಿಳೆಯರನ್ನು, ಚಿಕ್ಕಮಕ್ಕಳಿರುವ
ತಾಯಂದಿರನ್ನು ಸತಿಯಾಗದಂತೆ ನಿಷೇಧಿಸಿದುದು ಕಂಡು
ಬರುತ್ತದೆ. ಮಹಾಭಾರತದಲ್ಲಿ ಮಾದ್ರಿಯ ಸಹಗಮನ ಪ್ರಮುಖ
ವಾದುದು. ಅಳಿದ ಪಾಂಡುರಾಜನೊಡನೆ ತಾನು ಸಹಗಮನ
ಹೊಂದುವ ಮೊದಲು ತನ್ನ ಸಮಸ್ತಭಾರವನ್ನು ಕುಂತಿಗೆ
ನಿರ್ವಹಿಸಿಕೊಟ್ಟು ಅವಳು ಸಹಗಮನ ಕೈಗೊಳ್ಳುತ್ತಾಳೆ.
ತಮಿಳಿನ ಶಿಲಪ್ಪದಿಕಾರಂನಲ್ಲಿಯ ಕನ್ನಗಿಯ ಸಹಗಮನ, ತೆಲುಗು
ರಾಜ್ಯದ ಪೆರಂತಲಮ್ಮ ಎಂಬ ಮಹಿಳೆಯ ಸಹಗಮನ ಇಲ್ಲಿ
ಪ್ರಮುಖವಾದುವು.

**ಶಾಸನ ಸಾಹಿತ್ಯ :** ಕರ್ನಾಟಕದ ಶಾಸನಗಳಲ್ಲಿ ಸಹ
ಗಮನ ಪದ್ಧತಿ ಕಾಣಿಸಿಕೊಂಡುದು ಕ್ರಿ.ಶ. ೪ನೆಯ ಶತಮಾನದ
ನಂತರ. ಇದರ ಅತ್ಯಂತ ಪ್ರಾಚೀನವಾದ ಉಲ್ಲೇಖ ಕ್ರಿ.ಶ. ೪೦೦ರ
ಕದಂಬರ ಶಾಸನದಲ್ಲಿಯದು. ಕದಂಬ ರವಿವರ್ಮನ ರಾಣಿ
ಯೊಬ್ಬಳು ಪತಿಯೊಡನೆ ಮುಕ್ತಳಾದಂತೆ ಈ ಶಾಸನ ತಿಳಿಯ
ಪಡಿಸುತ್ತದೆ[೧೯]. ಮುಂದೆ ೮-೯ ಶತಮಾನಗಳ ವರೆಗೆ ಸಹ
ಗಮನದ ಉಲ್ಲೇಖಗಳು ದೊರಕುವುದಿಲ್ಲ. ೯ನೆಯ ಶತಮಾನ
ದಲ್ಲಿ ಬಳಕ್ಕ ಎಂಬವಳು ಸಹಗಮನ ಮಾಡಿರಬಹುದಾದ
ಉಲ್ಲೇಖವಿದೆ.[೨೦] ಚಿಕ್ಕಮಗಳೂರಿನ ಶಾಸನವೊಂದರಲ್ಲಿ ವೇಳೆ
ವಾಳಿ ಮತ್ತು ಸಹಗಮನ ಎರಡರ ನಿರೂಪಣೆಯೂ ಕಂಡು
ಬರುತ್ತದೆ. ಹಡವಳ ಬೋಕಯನ ಹಡವಳ್ತಿ ಕನಕವ್ವೆ ದೋರ

ಸಮುದ್ರದಲ್ಲಿ ತೀರಿಹೋಗಲು ಹಟ್ಟಿಗೊಂಡನೆಯ ನಾಯಕ ಅವಳಿಗೆ ನೇಕಿನಾಳಿಯಾಗುವಲ್ಲಿ ಅವನ ಮಡದಳಿಗೆ ಜೊಮ್ಮಕ್ಕ ಪತಿಯೊಡನೆ ಸಹಗಮನ ಮಾಡುತ್ತಾಳೆ ೨೧

ಕ್ರಿ. ಶ. ೧೦೫೭ರಲ್ಲಿ ಅನುಗಮನದ ಉತ್ತಮ ಉದಾಹರಣೆಯೊಂದು ಹೆಗ್ಗಡೆದೇವನಕೋಟೆಯ ಬೆಳತೂರು ಗ್ರಾಮದಲ್ಲಿ ದೊರೆಯುತ್ತದೆ. ನುಗುನಾಡ ಅಧಿಪತಿ ರವಿಗ ಮತ್ತು ಪೊನ್ನಕಬ್ಬೆಯರ ಮಗಳು ದೇಕಬ್ಬೆ. ಇವಳನ್ನು ನವಿಲೆನಾಡ ಅಧಿಪತಿ ಏಚ ಎಂಬವನಿಗೆ ಮದುವೆಮಾಡಿ ಕೊಡಲಾಗಿತ್ತು. ವೈರಿಗಳು ಯುದ್ಧರಂಗದಲ್ಲಿ ಏಚನನ್ನು ಸೆರೆಹಿಡಿದು ತಲಕಾಡಿಗೆ ಒಯ್ದು ಕೊಂದರೆಂಬ ಸುದ್ದಿ ದೇಕಬ್ಬೆಗೆ ತಿಳಿಯಿತು ಪತಿಯ ಮರಣಾನಂತರ ಜೀವಿಸಲು ಇಚ್ಛಿಸದ ದೇಕಬ್ಬೆ ಅನುಗಮನಕ್ಕೆ ಸಿದ್ಧಳಾದಳು. ಅವಳ ನಿರ್ಧಾರವನ್ನು ತಿಳಿದ ತಂದೆ, ತಾಯಿ, ಬಂಧು, ಬಾಂಧವರು ಪರಿಪರಿಯಾಗಿ ತಿಳಿಸಿ ಹೇಳಿದರೂ ಕದಲದೇ ಅವಳು ತಂದೆ ತಾಯಿಗಳಿಗೆ ತನ್ನ ಇಚ್ಛೆಯನ್ನು ಹೀಗೆ ಅರುಹುವಳು:

ನುಗುನಾಡ ಅಧಿಪತಿ ರವಿಗನ
ಮಗಳಾಗಿಯುಮಂತೆ ನವಿಲೆನಾಡಧಿಪತಿಗಂ
ನೆಗಳೆ ಸತಿಯಾಗಿ ಬಾಳ್ವುದು
ಬಗೆದರ್ಪನೆ ಕೊಟ್ಟಕೊಂಡ ಮನೆಯಶಮಳಿಯಲ್ ॥

ಕೊಟ್ಟ ಕೊಂಡ ಮನೆತನಗಳಿಗೆ ಅಪಕೀರ್ತಿಯನ್ನು ತರಲಿಚ್ಛಿಸದ ದೇಕಬ್ಬೆ ತನ್ನ ಭೂಮಿ, ಸಂಪತ್ತು, ಧನ, ಕನಕಗಳನ್ನು ದಾನ ಮಾಡುತ್ತಾಳೆ. ನಂತರ ತಂದೆ ತಾಯಿ ಬಂಧುಬಳಗದವರಿಗೆ

ನಮಸ್ಕರಿಸಿ ಅವರ ಆಶೀರ್ವಾದದ ಹೂ ಹೊರೆಹೊತ್ತು 'ದೇವಂಗಳ್ತಿಯಿಂ ಕೈಮುಗಿದುರಿವುರಿಯಂ ಪೊಕ್ಕು ದೇವಲೋಕಕ್ಕೆ ಪೋದಳ್' ಎಂದು ಆ ಶಾಸನ ತಿಳಿಸುತ್ತದೆ.[೨೨]

ಅಂದಿನ ಕಾಲದಲ್ಲಿ ಹೆಣ್ಣಿನ ಕುಲಕ್ಕೆ ಶಾಶ್ವತ ಮೌಲ್ಯವಾಗಿದ್ದ ಸಹಗಮನಪದ್ಧತಿ, ದೇಕಬ್ಬೆಯ ಅನುಗಮನ ಪ್ರಸಂಗದ ಮೂಲಕ ಸುಂದರವಾಗಿ ಹೊರಹೊಮ್ಮಿದೆ. ಸಾಮಾನ್ಯವಾಗಿ ಸಹಗಮನಪದ್ಧತಿ ಕ್ಷತ್ರಿಯರ ಮನೆಗಂಟಿದ ಸಂಪ್ರದಾಯ. ರೆ॥ ಕಿಟೆಲ್ಲರು 'ದೇಕಬ್ಬೆ ಜಾತಿಯಿಂದ ಶೂದ್ರಳು. ಪತಿಯ ಮರಣಾನಂತರ ಪ್ರಥಮ ಬಾರಿಗೆ ಸ್ವತಂತ್ರ ಮನೋಭಾವನೆಯಿಂದ ಸಹಗಮನ ಕೈಕೊಂಡ ಪ್ರಥಮ ಮಹಿಳೆ' ಎಂದು ತಿಳಿಸಿದುದು ಗಮನಿಸಬೇಕಾದ ಸಂಗತಿ[೨೩]. 'ಕೊಟ್ಟ ಕೊಂಡ ಮನೆಯಶಮಳಿಯುಲ್' ಎಂಬ ಅವಳ ನಿರ್ಧಾರ ಅಂದಿನ ಕಾಲದ ಜೀವಂತ ಪ್ರೇರಣೆಯಾಗಿ ಕಂಗೊಳಿಸುತ್ತದೆ.

ಮುಂದೆ ಕ್ರಿ. ಶ. ೧೧ ಮತ್ತು ೧೨ನೆಯ ಶತಮಾನಗಳಲ್ಲಿ ಸಹಗಮನದ ಅನೇಕ ಉದಾಹರಣೆಗಳು ಕಂಡುಬರುತ್ತವೆ. ಹೆಗ್ಗಡೆದೇವನಕೋಟೆಯ ಶಾಸನವೊಂದರಲ್ಲಿ[೨೪] ನವಲಷಿರಾಜನ ಎಳೆಯ ಹೆಂಡತಿಯೊಬ್ಬಳ ಅಗ್ನಿಪ್ರವೇಶ ಕಂಡುಬಂದರೆ, ಕ್ರಿ ಶ. ೧೨೮೬ರ ಶಿವಮೊಗ್ಗೆಯ ಶಾಸನವೊಂದರಲ್ಲಿ[೨೫] ಬೊಮ್ಮನಾಯ್ಕನ ಹೆಂಡತಿ ಬವೆನಾಯಕಿತ್ತಿ ತೋಳುಕಯಿಗೊಟ್ಟ ವಿಷಯ ತಿಳಿದುಬರುತ್ತದೆ. ಮಹದೇವಿ ಎಂಬವಳ ಸಹಗಮನದ ವಿಚಾರ ಕ್ರಿ. ಶ. ೧೧೫೦ ರ ಒಂದು ಶಾಸನದಲ್ಲಿ[೨೬] ಕಂಡು

ಬರುತ್ತದೆ. ಆದರೆ ಈ ಪದ್ಧತಿ ಮತ್ತೆ ಊರ್ಜಿತಾವಸ್ಥೆಗೆ ಬಂದುದು ವಿಜಯನಗರ ಕಾಲಕ್ಕೆ.

ಈ ಕಾಲದಲ್ಲಿ ಹೆಚ್ಚಾಗಿ ಸಹಗಮನ ಕೈಕೊಂಡವರು ಮೇಲ್ಪಟ್ಟದ, ರಾಜಮನೆತನಗಳ ಮಹಿಳೆಯರು. ಇದಕ್ಕೆ ಹಲವು ಉದಾಹರಣೆಗಳು ದೊರಕುವುದುಂಟು. ಕ್ರಿ.ಶ. ೧೩೫೪ರ ಹರಿಯಪ್ಪ ಒಡೆಯರ ಆಳಿಕೆಯಲ್ಲಿ ಸ್ವರ್ಗವಾಸಿಯಾದ ಮಾಲಗೌಡನ ಮಡದಿ ಚೆನ್ನಕ್ಕ ಎಂಬವಳು ಸಹಗಮನಹೊಂದಿ ಸ್ವರ್ಗದತ್ತ ನಡೆಯುತ್ತಾಳೆ.[೨೭] ಕ್ರಿ ಶ ೧೩೬೬ ರ ಬುಕ್ಕರಾಯನ ಆಳಿಕೆಯಲ್ಲಿ ತೀರಿಕೊಂಡ ಆವಲಿ ಚಂದಗೌಡನ ಮಗ ಬೀಚಗವುಡನ ಕಿರಿಯ ಪತ್ನಿ ಮುದ್ದಿಗಾವುಂಡಿ ಸಹಗಮನ ಮಾಡುತ್ತಾಳೆ.[೨೮] ಕ್ರಿ. ಶ. ೧೩೮೮ ರಲ್ಲಿ ದೇವಯನಾಯಕನೆಂಬವನು ಹಾವು ಕಡಿದು ಪ್ರಾಣ ತೆತ್ತಾಗ ಅವನ ಮಡದಿ ಮುದ್ದನಕೇತಿ ಮಹಾಸತಿಯಾಗುತ್ತಾಳೆ.[೨೯] ಕ್ರಿ. ಶ. ೧೪೧೦ರ ಶಾಸನವೊಂದರಲ್ಲಿ ಬೀರೂರ ಬೊಮ್ಮಗೌಡನ ಮಗ ಮಾದಪ್ಪನೆಂಬವನು ಮರಣಹೊಂದಲು ಮಡದಿ ಮಸಣಕ್ಕ ಪತಿಯೊಡನೆ ಸಹಗಮನ ಕೈಕೊಳ್ಳುತ್ತಾಳೆ.[೩೦] ಕ್ರಿ ಶ. ೧೫೧೭ ರ ಶಾಸನವೊಂದರಲ್ಲಿ ಬುಲಿಬಾರನ ಮರಣಾನಂತರ ಅವನ ಮೂವರು ಮಡದಿಯರು ತೋಳು ಕೈಕೊಟ್ಟ ವಿಷಯವಿದೆ.[೩೧]

ಹೀಗೆ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಸಹಗಮನ ಅಧಿಕ ಸಂಖ್ಯೆಯಲ್ಲಿ ಕಂಡುಬರಲು ದಂಡೆತ್ತಿಬಂದ ಪರಕೀಯರ ದೌರ್ಜನ್ಯವೇ ಮುಖ್ಯ ಕಾರಣವಾಗಿರಬೇಕು. 'ಪುರುಷವ್ರತ'ವನ್ನು ಕೈಕೊಂಡು ಮಂಡಲಿಸಾಸಿರದ ಎಡೆ

ತೊಜಿಸಾಡ ಉತ್ತಮದ ಗ್ರಾಮದಲ್ಲಿ ಸುರಲೋಕ ಪ್ರಾಪ್ತ ಳಾದ ದೇವಿಯಕ್ಕನ ವಿಷಯವನ್ನು ಶಿವಮೊಗ್ಗೆಯ ಶಾಸನ[೩೨] ತಿಳಿಯಪಡಿಸುತ್ತದೆ.

ಅಗ್ನಿಪ್ರವೇಶದ ಜೊತೆಯಲ್ಲಿಯೇ ಸಮಾಧಿಪ್ರವೇಶವೂ ಜಾರಿಯಲ್ಲಿತ್ತು. ಮಡಿದ ಪತಿಯೊಡನೆ ಅಗ್ನಿಪ್ರವೇಶ ಮಾಡು ವಂತೆ, ಸತ್ತ ಗಂಡನೊಡನೆ ಜೀವಂತವಾಗಿ ಸಮಾಧಿಯನ್ನು ಪ್ರವೇಶಿಸುವ ವಿಧಾನವಿದು. 'ಒಂದಾಳು ಮಟ್ಟಕ್ಕಿಂತ ಹೆಚ್ಚು ಆಳವಾದ ಗುಂಡಿ ತೋಡಿ ಅದರೊಳಗೆ ಅವಳನ್ನು ನಿಲ್ಲಿಸಿ, ಸುತ್ತಲೂ ಮಣ್ಣುನೂಕಿ ತುಳಿದು ಧಮ್ಮಸ್ಸು ಮಾಡಿ, ತಲೆಯ ಮೇಲೆ ದೊಡ್ಡಕಲ್ಲು ಹೇರಿ ಮಣ್ಣು ಎಳೆಯುತ್ತಿದ್ದರು. ಅವಳು ನಿಧಾನವಾಗಿ ಸಾಯುತ್ತಿದ್ದಳು'. ಇದು ಸತಿ ಸಮಾಧಿ ಪ್ರವೇಶಿ ಸಿದುದರ ಬಗ್ಗೆ ವಿದೇಶಿ ಪ್ರವಾಸಿಗಳು ನೀಡಿದ ವಿವರ.[೩೩] ಬಹುಶ ಒಂದು ಕಾಲಕ್ಕೆ ಕರ್ನಾಟಕವಲ್ಲಿ ಈ ರೂಪದಿಂದಲೂ ಪ್ರಚಾರದಲ್ಲಿದ್ದ ಸತಿ ಪದ್ಧತಿಯಿದು. ಸ್ತ್ರೀಯರ ಈ ಸಮಾಧಿ ಪ್ರವೇಶದ ಬಗೆಗೆ ಕರ್ನಾಟಕದ ಶಾಸನಗಳು ಸಾಕಷ್ಟು ಆಧಾರ ವನ್ನು ದೊರಕಿಸಿಕೊಡಬಲ್ಲವು. ಸೊರಬದ ಶಾಸನವೊಂದರಲ್ಲಿ ಹರವೂರ ಚಾವುಂಡ ಗಾವುಡನ ಮಗ ಬೊಮ್ಮಗವುಡ ಮರಣ ಹೊಂದಿದಾಗ ಆತನ ಮದವಳಿಗೆ ಬೊಮ್ಮಿಗವುಡಿ ಪತಿಯ ಸಮದಿ ಕುಳಿತು ಸ್ವರ್ಗಕ್ಕೆ ಸಂದ ಉಲ್ಲೇಖವಿದೆ.[೩೪] ಕಾಮಿನಿ ಮಹದೇವಿ ಎಂಬವಳು ಸಮಾಧಿ ಪ್ರವೇಶಿಸಿದ ವಿಷಯವನ್ನು ನಾಗಮಂಗಲದ ಶಾಸನವೊಂದು ವಿವರಿಸುತ್ತ 'ಅನುಪಮದಾನಿ, ಗಂಡಗಲಿ, ಸಜ್ಜನಮಂದ್ಯ ಸನೂನಕೀರ್ತಿ ಮಾನಿನಿ ಪರನಾಥ

ಧರ್ಮ ಮಹಾದೇವನ ರಮಣಿ ಮನೋಹರೆ, ಮಹಾಸತಿ ಶೀಲ ಗುಣೌಘಭೂಮಿ ಕಾಮಿನಿ ಮಹದೇವಿ ತನ್ನ ಮನೆಗಳು ಪ್ರತಿಪನ್ನದಿ ಸಂದಾಕಾದಿವರ' ಎಂದು ಅವಳ ಗುಣವರ್ಣನೆಯನ್ನು ಒದಗಿಸುತ್ತದೆ[೨೪]

ಅಗ್ನಿಪ್ರವೇಶ, ಸಮಾಧಿಪ್ರವೇಶ ಇವು ವಿಭಿನ್ನ ವಿಧಾನಗಳಾದರೂ ಪಡೆಯಬೇಕಾದ ಮೂಲಗುರಿ ಮಾತ್ರ ಒಂದೇ ಆಗಿದ್ದಿತು ಎನಿಸಿತ್ತೆ. ತ್ಯಾಗ ಮನೋಭಾವನೆಗಳೇ ಇದಕ್ಕೆ ಪ್ರೇರಕ ಶಕ್ತಿಯಾಗಿ ಅವರನ್ನು ಮಹಾಸತಿಯ ಪಟ್ಟಕ್ಕೇರಿಸುತ್ತಿದ್ದವು.

ಪ್ರಾಚೀನ ಸಾಹಿತ್ಯ : ಕನ್ನಡನಾಡಿನ ಕಾವ್ಯಗಳಲ್ಲಿಯೂ ಈ ಸಂಪ್ರದಾಯದ ಉಲ್ಲೇಖಗಳು ಕಂಡುಬರುತ್ತವೆ. ವಿಕ್ರಮಾರ್ಜುನವಿಜಯದಲ್ಲಿ ಬರುವ ಮಾದ್ರಿಯ ಸಹಗಮನ,[೨೫] ಅಜಿತಪುರಾಣದಲ್ಲಿ ಬರುವ ಗುಂಡಮಬ್ಬೆಯ ಸಹಗಮನ ಇಲ್ಲಿ ಉಲ್ಲೇಖನೀಯವಾದವು.

ಅತ್ತಿಮಬ್ಬೆ ಗುಂಡಮಬ್ಬೆಯರು ಚಾಲುಕ್ಯ ಚಕ್ರವರ್ತಿ ಆಹವಮಲ್ಲನ ಭುಜಾದಂಡದಂತಿದ್ದ ನಾಗದೇವನ ಮಡದಿಯರು ಯುದ್ಧರಂಗದಲ್ಲಿ ನಾಗದೇವ ವೀರಸ್ವರ್ಗವೇರಿದಾಗ ಪತಿಯ ಪರೋಕ್ಷದಲ್ಲಿ ಪತ್ನಿಯರು ಕೈಕೊಳ್ಳಬೇಕಾದ ಕರ್ತವ್ಯವನ್ನು ರನ್ನಕವಿ ಗುಂಡಮಬ್ಬೆಯ ಮುಖಾಂತರ ಹೀಗೆ ತಿಳಿಯಪಡಿಸುತ್ತಾನೆ:

'ಎರಡೇ ವಲಂ ಕುಲಂ ಕುಲವಧೂಗಾ
ಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ

ಚರಣಂ ಶುಭಚರಿತದೆ
ಮರಣಂ ಮೇಣಳಿಪಿನಿಂದೆ ಬಾಜ್ವಿದು ದೊರೆಯೇ ॥

ಕುಲವಧುವಾದವಳು ಪತಿಯ ಮರಣಾನಂತರ ಅನುಸರಿಸಬೇಕಾದ ಮಾರ್ಗಗಳು ಎರಡೇ ಎರಡು. ಜಿನಾದೀಕ್ಷಾಚರಣ ಅಥವಾ ಮಡಿದ ಪತಿಯೊಡನೆ ಶುಭಚರಿತವಲ್ಲಿ ಮರಣ ಗುಂಡಮಬ್ಬೆ ಅಕ್ಕನ ಒಪ್ಪಿಗೆ ಪಡೆದು 'ಮಡಿದ ಇನಿಯನನಪ್ಪಿಕೊಂಡು ಚಿತನಾಗೆ ಚಿತಾಗ್ನಿಯೊಳಣ್ಮಿ' ಪ್ರಾಣತ್ಯಾಗ ಮಾಡುತ್ತಾಳೆ.[೩೭]

ಜೈನಪರಂಪರೆಯಲ್ಲಿ ಸಹಗಮನಕ್ಕೆ ಸಂಪೂರ್ಣ ನಿಷೇಧವಿದ್ದ ಕಾಲದಲ್ಲಿ ಜೈನಮತೀಯಳಾದ ಗುಂಡಮಬ್ಬೆ ಈ ಮರಣವನ್ನಪ್ಪಿದುದು ಇದರ ಪ್ರಾಬಲ್ಯವನ್ನು ಸ್ಪಷ್ಟಪಡಿಸುತ್ತದೆ.

ಖಂಡೆಯ ಹಿಡಿದು ಅಗ್ನಿಪ್ರವೇಶಮಾಡಲು ಬಂದ ಸತಿಯ ಸುಂದರ ಚಿತ್ರವನ್ನು ಅಖಂಡೇಶ್ವರ ವಚನ[೩೮] ಹೀಗೆ ಕೊಡುತ್ತದೆ.

'ಗಂಡ ಸತ್ತನೆಂದು ಗಂಡನೊಡನೆ ಕೆಂಡವ ಬೀಳುವೆನೆಂದು
ಪುಂಡ ವೀರಸ್ತ್ರೀ ತಾನುಂಡು ದಂಡೆಯ ಕಟ್ಟಿಕೊಂಡು
ಖಂಡೆಯ ಪಿಡಿದು ತಂಡ ತಂಡದ ಜನರ ಮುಂದೆ
ಮೆರೆದುಕೊಂಡು ಬಂದು
ಕಿಚ್ಚಿನ ಕೆಂಡವ ಕಂಡು ಹೆದರಿ ಹಿಮ್ಮೆಟ್ಟಿದರೆ ಅವಳಿಗದೇ
ಭಂಗ
ಅಲ್ಲದೇ ಶೃಂಗಾರವೇರುವುದೇ.'

ಇದರಿಂದ ಸಹಗಮನ ಕಾಲಕ್ಕೆ ಕೈಯಲ್ಲಿ ಸ್ತ್ರೀ ಖಡ್ಗವನ್ನು ಧರಿಸುತ್ತಿರಬಹುದೆಂದು ತಿಳಿದುಬರುತ್ತದೆ.

ಅನಂತನಾಥಪುರಾಣದಲ್ಲಿ[೧೯] ಸಹಗಮನದ ಸುಂದರ ವೃತ್ತವೊಂದು ಹೀಗಿದೆ: ವಸುಷೇಣನ ಮಡದಿ ಸುನಂದೆಯನ್ನು ಬಯಸಿದ ಚಂಡಶಾಸನನ ಕಪಟೋಪಾಯ ಅವನಿಗೆ ಮೃತ್ಯು ವಾಗಿ ಪರಿಣಮಿಸುತ್ತದೆ. ಪತಿಯ ಮಾಯದ ಶಿರವನ್ನು ಕಂಡ ಸುನಂದೆ ತನ್ನ ಪತಿ ಮಡಿದನೆಂದೇ ಬಗೆದು ತಾನೂ ಮರಣ ಹೊಂದುತ್ತಾಳೆ. ಸುನಂದೆಗಾಗಿ ಆಸೆಪಟ್ಟ ಚಂಡಶಾಸನ ಆವ ಳೊಡನೆ ಅಗ್ನಿಪ್ರವೇಶ ಮಾಡುವಾಗ ಚಂಡಶಾಸನನ ಮಡದಿ ಯರು ಪತಿಯೊಡನೆ ಸಹಗಮನ ಮಾಡುವ ವೃತ್ತವಿದು.

'ತುಡುಗೆಯನಾಯ್ದು ಕೊಂಡುಳಿದವಂ ಸಖಿಯರ್ಗಿರವೇಳ್ದು
ಬಂಧುಗ
ಳ್ಕೊತ್ತಡರ್ದಿರೆ ಮೋಹಮಂ ಬಿಡಿಸುವಾಶ್ರಿತರ್ಗಾದೆಡರಂ
ಕಳಲ್ಚಿ ಬೀ
ಳ್ಕೊಂಡಿಸುತ ಪೊನ್ನಮಾಣಿಕದ ಬಾಯಿನಮಂ
ಸಮಕಟ್ಟಿ ವ ಱ್ತ ಬಂ
ದೊಡೆ ಹಿಡಿಹಾರಮೀವಳನಿಯಚ್ಚರಿಯಾದುದು
ಪೆಂಡವಾಸದೊಳ್॥

ಸಹಗಮನದ ಸಕಲಸಿದ್ಧತೆ ಮಾಡಿಕೊಂಡ ಚಂಡಶಾಸನನ ಮಡದಿಯರು ಎಲ್ಲವನ್ನು ಕಂಡು ಕೈಮುಗಿದು ತಮ್ಮ ತಪ್ಪನ್ನು ಕ್ಷಮಿಸಿರಿ ಎಂದು ಕೇಳಿಕೊಂಡು ಸಹಗಮನ ಕೈಕೊಳ್ಳುತ್ತಾರೆ.

೧೬ ನೆಯ ಶತಮಾನದ ಅಂತ್ಯಭಾಗದಲ್ಲಿ ರಚಿತವಾದ ರಾಮನಾಥಚರಿತ್ರೆ[೪೦]ಯಲ್ಲಿ ಸಹಗಮನ ಪದ್ಧತಿಯ ಕೆಲ ಅಂಶಗಳನ್ನು ಮನಗಾಣಬಹುದು.

ದೊರೆ ಕಂಪಿಲರಾಯ ಮಡದಿ ರತ್ನಾಜಿಯ ಕಪಟ ಮಾತಿನಂತೆ ಮಗ ಕುಮಾರರಾಮನನ್ನು ಕೊಲ್ಲುವಂತೆ ಮಹಾಪ್ರಧಾನ ಬೈಚಪ್ಪನಿಗೆ ಆಜ್ಞೆ ಮಾಡುತ್ತಾನೆ ಕುಮಾರರಾಮನನ್ನು ನೆಲಮಾಳಿಗೆಯಲ್ಲಿ ಮುಚ್ಚಿಟ್ಟು ಬೈಚಪ್ಪ ಅವನನ್ನು ಕೊಂದಿರುವದಾಗಿ ಕೃತಕನಾಟಕವನ್ನಾಡಿದಾಗ, ರಾಮನಾಥನ ಐವರು ಮಡದಿಯರು ಸಹಗಮನಕ್ಕೆ ಸಿದ್ಧರಾಗುತ್ತಾರೆ. ಇತ್ತ ಮಂತ್ರಿ ನೆಲಮಾಳಿಗೆಯ ಸಮೀಪದಲ್ಲಿ ಕೊಂಡವನ್ನು ರಚಿಸಿ ಶ್ರೀಗಂಧದ ಕಟ್ಟಿಗೆಯಿಂದ ಕಿಚ್ಚುಮಾಡಿಸಿದ.

ಬಾಳೆಯ ಚಪ್ಪರವನು ಹಾಕಿಸಿ ಆಗ
ಮೇಲೆ ಲೋವೆಗಳಿಂದ ಎಸೆಯೇ
ಸಾಲು ತೋರಣಗಳ ಕಟ್ಟಿ ಕನ್ನಡಿಗಳಾ
ಮೇಲೆಸೆವವು ಹೊನ್ನ ಕಳಸಾ ॥

ಸಾರಿಯರು ಮೆರೆದರು ಪಲ್ಲಕ್ಕಿಯೊಳು
ನಾರಸೀರೆಯನು ಉಡಿಸಿ
ನೀರೆಯರು ಮಾಸ್ತಿಯರಾಗಿ ಬಂದರು
ನಾರಿ ಜಾಗಂಧಿಯರೆಲ್ಲಾ ॥

ಏಳು ಮುತ್ತಿನ ಬಾಗಿನಗಳ ತಂದಾಗ
ಲೋಲಾಕ್ಷಿಯರಿಂದ ಕೊಡಿಸಿ
ವ್ಯಾಳಯ ನಡೆಯೆಂದು ಮಂತ್ರೀಶ ಪೇಳಲು
ಲೋಲಾಕ್ಷಿಯರು ಕೊಂಡದೆಡೆಗೆ ॥

ಬಂದರು ಕೊಂಡದ ಮುಂದೆಸೆಯೊಳು ನಿಂದು
ಗಂಧಾಕ್ಷತೆಧೂಪದಿಂದಾ
ವಂದಿಸಿ ಧೂಪದೀಪಾರ್ತಿಗಳನೆತ್ತಿ
ಅಂದು ಕೈಮುಗಿದರೆಲ್ಲರಿಗೆ ॥

ಮುಂದಿನ ಜನ್ಮಾಂತರಗಳಲ್ಲಿ ರಾಮನೇ ತಮ್ಮ ಗಂಡನಾಗಲಿ ಎಂದು ವರವನ್ನು ಬೇಡಿಕೊಳ್ಳುತ್ತ ಅಂಗನೆಯರು ಕೊಂಡದಲ್ಲಿ ಬೀಳಲು ಅವರನ್ನು ಗುಪ್ತಮಾರ್ಗದ ಮುಖಾಂತರ ರಾಮನಿದ್ದ ನೆಲಮಾಳಿಗೆಗೆ ಕರೆದೊಯ್ಯುತ್ತಾರೆ. ಇದು ಸಹಗಮನದ ಕೃತಕ ನಾಟಕವಾದರೂ ಆ ಸಂದರ್ಭದ ಒಂದು ಚಿತ್ರ ಅನುಭವಕ್ಕೆ ಬರುತ್ತದೆ. ಕಾಲಾಂತರದಲ್ಲಿ ವೈರಿಗಳಿಂದ ತನಗೆ ಪ್ರಾಣಾಪಾಯ ಒದಗಿದ ಪ್ರಸಂಗದಲ್ಲಿ ಕುಂಡಗಳನ್ನು ರಚಿಸಿಕೊಂಡು ಸಹಗಮನಕ್ಕೆ ಸಿದ್ಧರಾದ ತನ್ನ ಮಡದಿಯರನ್ನು ಕಂಡ ಸಂದರ್ಭ ಹೀಗಿದೆ:

ಕೇಸುರಿಗೆದರುವ ಕೆಂಡಗಳಿಂದೆ ವಿ
ಲಾಸವಡೆದ ಕುಂಡಗಳೊಳು
ಸೂಸುತ ಕರ್ಪೂರಗಳನು ನಿಂದಿರ್ದ ಮ
ಹಾಸತಿಯರ ಕಂಡನಲ್ಲಿ ॥

ತನ್ನಳಿವುಳಿವ ಕೇಳುತ ಕೆಳದಿಯುರಿಂದ
ಕನ್ನಡಿ ನಿಂಬೆವಣ್ಗಳನು
ಮನ್ನಿಸುತಲ್ಲಿರ್ದ ನಿಜಸತಿಯುರ ಮೊಗ
ಗನ್ನಡಿಗಳ ಕಂಡನೊಸೆದು ॥

ನುಡಿಯುಲಾ ಮಾತು ಹಿಂಚಿತು ಕುವರನನೊಡ
ನೊಡನಮರ್ದಮರ್ದಪ್ಪಿಕೊಂಡು
ಮಡದಿಯುರಾನಂದ ಕೈವಿಡಿಗೆ ಬೀಳ್ವರಂ
ದಡಿಗಡಿಗಗ್ನಿಕುಂಡದೊಳು ॥

ನಳನಳಿಸುವ ಕೆಂದಾವರೆಯಿಡಿದಿರ್ದ
ಕೊಳದೊಳು ಜಲಕೇಳಿಯೊಳು
ಎಳಸಿ ಬೀಳ್ದಂತೆ ಬಿಳ್ದರು ಲಲನೆಯರಾ
ಕಳಕಳಿಪಗ್ನಿಕೊಂಡದೊಳು ॥

ಪತ್ನಿಯರನ್ನು ಅಗ್ನಿಕುಂಡಕ್ಕೆ ಅರ್ಪಿಸಿ ಯುದ್ಧದಲ್ಲಿ ಹೋರಾಡುತ್ತ ಕುಮಾರರಾಮ ವೀರಮರಣವನ್ನು ಪಡೆದುಕೊಳ್ಳುತ್ತಾನೆ.

೧೫ನೆಯ ಶತಮಾನದ ಸಿದ್ಧೇಶ್ವರ ಪುರಾಣ[೧೧] ಸಹಗಮನದ ಸನ್ನಿವೇಶವನ್ನು ಹೀಗೆ ವಿವರಿಸುತ್ತದೆ: ಸಹಗಮನ ಕೈಕೊಳ್ಳುವ ಸ್ತ್ರೀ ಪ್ರಥಮದಲ್ಲಿ ನಾಡನ್ನಾಳುವ ಭೂಪತಿಯ ಅಪ್ಪಣೆಯನ್ನು ಪಡೆಯಬೇಕಿತ್ತು. ಆಮೇಲೆ ಸೂಸಕದಂಡೆಯಿಂದ ಮುಡಿಯನ್ನಲಂಕರಿಸಿಕೊಂಡು ಅರಿಷಣಬಣ್ಣದ ಸೀರೆ

ಯನ್ನುಟ್ಟು, ಆಭರಣಗಳನ್ನು ತೊಟ್ಟು ಬೇರೆಬೇರೆ ಪುಷ್ಪಗಳಿಂದ ಅಲಂಕೃತಳಾಗಿ ಒಂದು ಕೈಯಲ್ಲಿ ನಿಂಬೆ, ಮತ್ತೊಂದು ಕೈಯಲ್ಲಿ ಕನ್ನಡಿ ಹಿಡಿದು ವೀರನಾದದಿಂದ ಕುಣಿದಾಡುತ್ತ ವಾದ್ಯಘೋಷಗಳೊಂದಿಗೆ ಅಗ್ನಿಗೆ ಬಂದು ಸಹಗಮನ ಮಾಡಬೇಕಿತ್ತು.

೧೬ನೆಯ ಶತಮಾನದ ತೋಂಟದರಾಯನ ಸಾಂಗತ್ಯ[೪೨]ದಲ್ಲಿ ಬರುವ ಸಹಗಮನ ಪ್ರಸಂಗ ಒಂದು ಅತ್ಯುತ್ತಮ ಉದಾಹರಣೆ. ರಾಜಕುಮಾರ ತೋಂಟದರಾಯನ ರಾಣಿ ಚೆನ್ನಬಸವಮ್ಮ ಪತಿಯೊಡನೆ ಸಹಗಮನ ಕೈಕೊಂಡ ಚಿತ್ರ ಅದರಲ್ಲಿ ಸುಂದರವಾಗಿ ಒಡಮೂಡಿದೆ.

ಆ ಕುಮಾರನ ರಾಣಿ ಚೆನ್ನಬಸವಮ್ಮ
ತಾ ಕಲಿಯಾಗಿ ಸಿಂಗರಿಸಿ
ಶ್ರೀ ಕೈಲಾಸಕೆಯ್ದಿದ ತನ್ನ ಗಂಡನಂ
ದಾ ಕಮಲಾಯತ ನೇತ್ರೆ ॥
ಎಡಗೈಯ ಮಣಿಗನ್ನಡಿ ಬಲಗೈಯೊಳು
ಪಿಡಿದಲಗುವ ಜಮುದಾಂಡೆ
ಮುಡಿದ ಗರಿಯ ಬಾಸಿಗವಮರಿದರನ್ನ
ದೊಡವೊಪ್ಪಲ್ಕೈತಂದಳಾಗ ॥
ಭಲದಂಕನುಲ್ಲನಲ್ಲನ ತಲೆವಿಡಿದು ಹೆ
ಕ್ಕಳವಿಕ್ಕಿ ಹೆಚ್ಚಿಯುಬ್ಬೆದ್ದು
ಕಳಕಳಿಸುತೆ ಕುಕಿಲೆಂದಾರ್ದು ಸತಿಯುರ
ತಲೆವಣಿ ನಗೆಮೊಗವೆರಸಿ ॥

ಹಸನಾದುದು ನಿನ್ನಡಿಗಳ ಬಳಿವಿಡಿ
ದೆಸೆದಿಹಳಲ್ಲಾನೆನ್ನ
ಅಸು ನಿನ್ನಡಿಗಳಾಗಿರ್ಪೆನ್ನನುಳಿದು ಪೋ
ಹಿಸಿದೆಯು ಸುರನಾರಿಯರ ॥

ನೋಡಲೀವೆನೆ ನಿನ್ನ ಮೊಗವನವರನೊಮ್ಮೆ
ನೋಡೆನ್ನ ಪಂಥವನಾಣ್ಮ
ಆಡಿದೊಡೇನಹುದೀಗಳೆ ನಿನ್ನೊಡ
ಗೂಡಿ ನಿನ್ನನೆ ಮೆಚ್ಚಿಸುವೆನು ॥

ಅತ್ತೆ ಮಾವಂದಿರ ಪಾದಕೆರಗಿ ತನ್ನ
ಚಿತ್ತವಲ್ಲಭನ ಮೂರ್ತಿಯನು
ಚಿತ್ತದೊಳಿಟ್ಟು ಜಾನಿಸುತೆ ಶ್ರೀಗುರುರಾಯ
ನಿತ್ತಲಿಂಗಕೆ ಪೊಡಮಡುತೆ ॥

ಕಂಡಚ್ಚರಿಗೊಂಬುತೆ ಶಿವಭಕ್ತರ
ತಂಡವುಘೇ ಉಘೇಯೆನಲು
ಖಂಡೇಂದುಧರನ ತೊಡೆಯೊಳಿಪ್ಪ ತನ್ನಯ
ಗಂಡನನಮರ್ದಪ್ಪಿದಳು ॥

ರಾಣಿ ಚೆನ್ನಬಸವಮ್ಮ ಪತಿ ತೋಂಟದರಾಯನ ಮರಣದ ಸುದ್ದಿಯನ್ನು ಕೇಳಿ ಸಹಗಮನಕ್ಕೆ ನಿರ್ಧರಿಸುತ್ತಾಳೆ. ಕನ್ನಡಿ, ಪಿಡಿದಲಗು, ಜಮದಾಡೆ, ಬಾಸಿಗ, ಒಡವೆಗಳನ್ನು ಧರಿಸಿ ಸಹಗಮನಕ್ಕೆ ಸಿದ್ಧಳಾಗುತ್ತಾಳೆ. ಮಡಿದ ಪತಿಯ ತಲೆಯನ್ನು ಎತ್ತಿ ಪ್ರೀತಿಯಿಂದ ಆಲಂಗಿಸಿಕೊಂಡು, ಅವನ

ಸದ್ಗುಣಗಳನ್ನು ಕೀರ್ತಿಸುತ್ತ, ಸುರನಾರಿಯರನ್ನು ನೋಯಿಸಿದ ಅವನಿಗೆ ತನ್ನ ಛಲವನ್ನು ತಿಳಿಯಪಡಿಸುತ್ತಾಳೆ. ದುಃಖಪಡುತ್ತಿದ್ದ ಗೆಳತಿಯರಿಗೆ ಕೈಸನ್ನೆ ಮಾಡಿ ಸಮಾಧಾನಪಡಿಸಿ ಅತ್ತೆ ಮಾವಂದಿರ ಆಶೀರ್ವಾದಗಳನ್ನು ಮುಡಿಯಲ್ಲಿ ಧರಿಸಿದ ಚೆನ್ನಬಸವಮ್ಮ ಅಗಲಿದ ಪತಿಯೊಡನೆ ಒಂದಾದ ಸುಂದರ ಸನ್ನಿವೇಶ ಆ ಸಾಂಗತ್ಯದಲ್ಲಿ ಚಿತ್ರಿತವಾಗಿದೆ.

**ಜಾನಪದ ಸಾಹಿತ್ಯ :** ಜಾನಪದ ಖಂಡಕಾವ್ಯ[೪೩]ವೊಂದರಲ್ಲಿ ಈರೋಬಿ ಎಂಬ ಮಹಿಳೆ ಸಹಗಮನ ಹೊಂದಿದ ಚಿತ್ರ ಹೀಗೆ ಮೂಡಿಬಂದಿದೆ: ನಸುಕಿನಲ್ಲಿ ಈರೋಬಿ ಕೆಟ್ಟ ಕನಸೊಂದರಲ್ಲಿ

ಮುಗುತಿ ಮುರಿಯೋದ ಕಂಡೆ, ಮುಂಬಲ್ಲು ಸಿಡಿಯೋದ ಕಂಡೆ
ಗಿಂಡಿ ತುಂಡಾಗಿ ಒಡೆಯೋದ ಸಪುನವ
ಕಂಡೆನಮ್ಮ ಕಾಲಗಳಿಗೇಲಿ ॥

ಎಂದು ಮುಂಜಾನೆ ಅತ್ತೆಗೆ ವಿವರಿಸುತ್ತಾಳೆ. ನಿತ್ಯದಂತೆ ತನ್ನ ಕೆಲಸ ಮುಗಿಸಿದ ಈರೋಬಿ ಎಮ್ಮೆ ಕಾಯಲು ಹೋದಾಗ ಅಲ್ಲಿ ದಾರಿಕಾರರು

ದಂಡಿನ್ಹಾದೀಲಿ ಹಿಂಡೆಮ್ಮೆ ಮೇಸೋಳೆ
ನಿನ್ನ ಗಂಡನ ತಲೆಯ ಹೊಡೆದಾರೆ-ಈರೋಬಿ
ಹಿಂಡೆಮ್ಮೆ ಬಿಟ್ಟು ಮರೆಯಾಗ ॥

ಎಂದು ಅವಳ ಪತಿ ಮಡಿದ ಸುದ್ದಿಯನ್ನು ತಿಳಿಸಿದರು. ಪತಿಯ ಶೌರ್ಯದ ಮೇಲೆ ತುಂಬ ವಿಶ್ವಾಸವಿದ್ದ ಈರೋಬಿ ಈ ಸುದ್ದಿಯನ್ನು ನಂಬದೇ ಹೋದಳು

ಸತ್ತ ಸುದ್ದಿ ಬರಲಿ, ನೆತ್ತರದ ಅರಬಿ ಬರಲಿ
ಕಿತ್ತುಳ್ಳಿ ಬರಲಿ ಗುರುತೀಗೆ-ಸೋಮವಾರದ
ಹೋತನಂತೆ ಕೊಂಡ ಹೋಗತೀನಿ ॥

ಹೀಗೆ ಹೇಳುವಲ್ಲಿ ನೆತ್ತರು ಬಟ್ಟೆಯೊಂದಿಗೆ ಪತಿಯ ಮರಣದ ಸುದ್ದಿಯೂ ಬಂದಿತು. ರಕ್ತ ಸಿಕ್ತ ಆಯುಧವೂ ಬಂದಿತು. ಈರೋಬಿ ಗುರುತುಗಳನ್ನರಿತು ಸಹಗಮನಕ್ಕೆ ಸಿದ್ಧಳಾಗುತ್ತಾಳೆ

ಕೊಂಡ ಕೂಡಿಸ್ಯಾಳೆ ಗಂಡನ ತರಿಸ್ಯಾಳೆ
ಗಂಡನ ಕಷ್ಟವ ಮಾಡ್ಯಾಳೆ ಈರೋಬಿ
ಮುಂದಕ ಹೊರಟಳೆ ಈರೋಬಿ ॥

ಹೀಗೆ ಕೊಂಡವನ್ನು ಸಿದ್ಧಪಡಿಸಿಕೊಂಡು ಸಹಗಮನಕ್ಕೆ ಸಿದ್ಧಳಾದ ಈರೋಬಿಯನ್ನು ಎಷ್ಟೋ ಜನ ಬಿಡಿಸಹೋದರೂ

ಗಂಡ ಸಾಯೋಕಿಂತ, ಮುಂಡ್ಯಾಗೋಕಿಂತ
ಕಂಡೋರ ಮನೆಯ ಕಸನ್ಹಾಕೆ ಸಾಯೋಕಿಂತ
ಕೊಂಡವನ್ನೇರೂದೆ ಕಡುಲೇಸು ॥

ಎಂದು ಪತಿ ಮಡಿದ ನಂತರ ಮುಂಡೆಯಾಗಿ, ಕಂಡವರ ಮನೆಯ ಕಸವಾಗಿ ಸಾಯುವದಕ್ಕಿಂತ ಕೊಂಡವನ್ನೇರುವುದೇ ಲೇಸೆಂದು

ಭಾವಿಸಿ, ಬಂಗಾರದ ಆಭರಣಗಳನ್ನು ಧರಿಸಿ ಬೀದಿಯಲ್ಲಿ ಮುನ್ನಡೆಯುತ್ತಾಳೆ.

ಕೊಂಡಕ್ಕೋಗೋಳ ಕೈಲಿ ಹನ್ನೆರಡು ನಿಂಬೆಹಣ್ಣು
ಹನ್ನೆರಡು ದುರುಬು ಕರುವಲ್ಲೆ-ಈರೋಬಿ
ಕೊಂಡಕ್ಕೋಗೋದೆ ಸಡಗರ ॥

ನಿಂಬೆಯ ಹಣ್ಣುಗಳನ್ನು ಅಂಬರಕ್ಕೀಡಾಡುತ್ತ, ಮಾರ್ಗ ಮಧ್ಯಕ್ಕೂ ಬಾಳೆಹಣ್ಣು, ಅರಿಷಣ, ಸೀಗೆಕಾಯಿಗಳನ್ನು ಸೂರೆ ಮಾಡುತ್ತ ಕಳಸವನ್ನು ಹೊತ್ತುಕೊಂಡು ಬಂದ ಈರೋಬಿ ಅವನ್ನಿಟ್ಟು ಕೊಂಡಕ್ಕೆ ಮೂರುಸಲ ಪ್ರದಕ್ಷಿಣೆ ಹಾಕಿ ಅಗ್ನಿಯನ್ನು ಪ್ರವೇಶಿಸುತ್ತಾಳೆ.

ಇದೇ ಹಾಡಿನ ಮತ್ತೊಂದು ಪಾಠದಲ್ಲಿ[೪೪] ಈಚಲಗರಿ, ನಿಂಬೆಹಣ್ಣು, ಕನ್ನಡಿಯನ್ನು ಹಿಡಿದುಕೊಂಡು ನೀಲಪತ್ತಲುಟ್ಟು ಈರೋಬಿ ಅಗ್ನಿಪ್ರವೇಶ ಮಾಡಿದ ವಿಷಯ ಬರುತ್ತದೆ.

ನಾಗವ್ವ ಎಂಬವಳ ಸಹಗಮನದ ಕಥೆ[೪೫] ಇಂತಹ ಮತ್ತೊಂದು ಎಸಳು. ಮದುವೆಗೆ ಮುಂಚೆ ನಿಶ್ಚಯಿಸಿದ ಪತಿ ಮಡಿದರೆ ಅವನೊಡನೆ ಚಿತೆಯನ್ನೇರಿದ ಮಹಿಳೆ ಈಕೆ.

ನವಿಲೂರ ಗೌಡರ ಮಗ ಚಿಂದಯ್ಯನಿಗೆ ಪಕ್ಕದ ಹಳ್ಳಿಯ ನಾಗವ್ವನನ್ನು ನಿಶ್ಚಯಿಸುತ್ತಾರೆ. ಬಳೆಗಾರ ಬಂದು ನಾಗವ್ವನಿಗೆ ಮದುವೆಯ ಬಳೆಯನ್ನಿಡಿಸುವಾಗ ಯಾರೋ ಬಲಗಡೆ ಸೀತರು. ಆದರೂ ಮದುವೆಯ ಸಕಲಸಿದ್ಧತೆಗಳು ಮುನ್ನಡೆದವು.

ಇತ್ತಕಡೆಗೆ ನವಿಲೂರಲ್ಲಿ ಚಿಂದಯ್ಯ ಉಗುರೆಣ್ಣೆ ಮೇಯುವಾಗ ಬೇಡರು ಅವರ ಆಡುಗಳನ್ನು ಕದ್ದೊಯ್ಯಲು

ಕಟ್ಟಿದ ಕಂಕಣ ಇಕ್ಕಿದ ಸೆರಗೆಣ್ಣೆ
ಅಪರಂಜಿ ಬಿಲ್ಲು ಬಲಗೈಲಿ । ಹಿಡಕೊಂಡು
ಸೀಗೆಯ ದಾಟಿ ನಡೆದನು । ಚಿಂದಯ್ಯ
ಬೇಡರ ದಂಡನ್ನೆ ಕಡಿದಾನೆ ॥

ಹೀಗೆ ಬೇಡರನ್ನು ಕೊಂದು ಆಡುಗಳ ಜೊತೆಗೆ ಚಿಂದಯ್ಯ ಮನೆಗೆ ಬಂದಾಗ ಕುಂಟು ಆಡಿನ ಮರಿಯೊಂದು ಕಣ್ಮರೆಯಾಗಿತ್ತು. ಅದನ್ನು ಹುಡಕುತ್ತ ಹೊರಟ ಚಿಂದಯ್ಯನನ್ನು ಸೀಗೆಯ ಮೆಳೆಯಲ್ಲಿ ಕಾದುಕುಳಿತ ಬೇಡರು ಕೊಂದು ಹಾಕಿದರು. ಈ ಸುದ್ದಿ ತಿಳಿದ ನಾಗವ್ವ ಸಹಗಮನಕ್ಕೆ ಸಿದ್ಧಳಾಗುತ್ತಾಳೆ.

ಕಿಚ್ಚಿನ ಸುತ್ತ ನುಚ್ಚಕ್ಕಿ ಹಸೆ ಹುಯ್ದು
ಮುತ್ತಿನ ಕಳಸ ನಡುವಿರಿಸಿ । ನಾಗವ್ವನ
ಕಿಚ್ಚಿಗೆ ಧಾರೆ ಎರೆದರು ॥

ಹೀಗೆ ನಾಗವ್ವ ಪತಿಯೊಡನೆ ಸಹಗಮನ ಹೊಂದಿದಳು.

'ಜಗುನೆಯ ಜಕ್ಕಣ್ಣ, ಮಗುನೆಯ ಬ್ಯಾಟೆಗಾರ' ಎಂಬ ಲಾವಣಿಯು[೬] ಅಂತರಂಗದ ಎಳೆ ಸಹಗಮನ. ಮೂಡಲ ಸೀಮೆಯ ಮಳಿಕೆಗೌಡನ ಮಗಳು ತಮ್ಮ ಹೊಲವನ್ನು ನಾಶಪಡಿಸುವ ಹಂದಿಯನ್ನು ಕೊಂದ ವೀರನನ್ನು ಮದುವೆಯಾಗುವದಾಗಿ ಪಣತೊಟ್ಟಿದ್ದಳು. ಅನೇಕರು ಇದರಲ್ಲಿ ಸೋತು

ಸಾವನ್ನಪ್ಪಿದ್ದರು. ಆದರೆ ಜಗುನೆಯ ಜಕ್ಕಣ್ಣ, ಮಗುನೆಯ ಬ್ಯಾಟೆಗಾರ ಎಂಬ ಅಣ್ಣ ತಮ್ಮಂದಿರು ಈ ಕಾರ್ಯಕ್ಕೆ ಸಿದ್ಧರಾದರು. ಬೆಳ್ಳಿಕಟ್ಟಿನ ಕೋವಿ, ಜಾಲಜೂಲನೆಂಬ ನಾಯಿ ಯೊಡನೆ ಆ ಹಂದಿಯ ಬೇಟೆಗೆ ಹೋದ ಸಮಯದಲ್ಲಿ ಜಕ್ಕಣ್ಣ ಹೆದರಿ ಹಿಂದುಳಿದ. ಮಗುನೆಯ ಬ್ಯಾಟೆಗಾರ ಮುಂದುವರಿದು ಹಂದಿಯನ್ನು ಕೊಂದು ತಾನೂ ಮಡಿಯುತ್ತಾನೆ. ಆಗ ಜಕ್ಕಣ್ಣ ಹಂದಿಯನ್ನು ಕೊಂದವನು ತಾನೇ ಎಂದು ಹೇಳಿ ಕೊಂಡು ಅವಳನ್ನು ಮದುವೆಯಾಗಲಿಚ್ಛಿಸುತ್ತಾನೆ. ಆದರೆ ಉಪ್ಪರಿಗೆಯ ಮೇಲೆ ಕುಳಿತು ಎಲ್ಲವನ್ನು ನೋಡಿದ ಅವಳು ಹಾರವನ್ನು ಮಡಿದ ಮಗುನೆಯ ಬ್ಯಾಟೆಗಾರನ ಕೋವಿಗೆ ಹಾಕಿ ಅವನ ಶವದ ತುಂಡುಗಳನ್ನು ಮಡಿಲಲ್ಲಿ ಕಟ್ಟಿಕೊಂಡು, ಮುಂದೊಂದು ಕಾಲಕ್ಕೆ ತಾವಿಬ್ಬರೂ ಚೆಂಡುಹೂವಿನ ಗಿಡ ಗಳಾಗಿ ಹುಟ್ಟುವುದಾಗಿ ಮಾವನಿಗೆ ಭಾಷೆಕೊಟ್ಟು ಮಹಾಸತಿ ಯಾಗುತ್ತಾಳೆ.

ಚಿತ್ರದುರ್ಗದ ಹರ್ತಿಬಯಲಿಗೆ ಸಂಬಂಧಿಸಿದ ಜನಪದ ಪದ್ಯ[೪೭]ವೊಂದರಲ್ಲಿ ಮಹಾಸತಿಯ ಕಥೆಯೊಂದು ಹೀಗೆ ಬರುತ್ತದೆ:

ಗೊಲ್ಲರ ಕುಲದ ಹಿರಿಯಟ್ಟಿ ಜಂಪವ್ವನ ಮಗನೂ ಸಿರಾದ ಪಾಳೇಗಾರ ರಂಗಣ್ಣನಾಯ್ಕರ ಪ್ರೀತಿಗೆ ಪಾತ್ರನಾದವನೂ ಆದ ನಾಗಣ್ಣ ಬಾಣಂತಮ್ಮ ಮತ್ತು ಕಂಕಜಟ್ಟಿ ಎಂಬ ಜಟ್ಟಿ ಗಳನ್ನು ಕೊಂದು ಹರ್ತಿಕೋಟೆಯಲ್ಲಿ ಕೀರ್ತಿಯನ್ನು ಬೆಳಗಿಸಿದ ವೀರ. ಇವನ ಹೆಂಡತಿ ತಿಪ್ಪವ್ವೆ. ಮದುವೆಯಾದ ೪ ವರ್ಷಗಳಲ್ಲಿ

ಎರಡು ಮಕ್ಕಳ ತಾಯ್ತಂದೆಯಾದರು. ಸಾಣೆಕೆರೆಯ ಯುದ್ಧದಲ್ಲಿ ನಾಗಣ್ಣ ಮಡಿದ ಸುದ್ದಿ ಕೇಳಿ ತಿಪ್ಪವ್ವ ಎರಡು ಮಕ್ಕಳನ್ನೂ ಪ್ರಕೃತಿಗೆ ಒಪ್ಪಿಸಿ ಮಹಾಸತಿಯಾಗಲು ನಿರ್ಧರಿಸಿದಳು.

ಬಾಳೆಯ ಮರಕ ಬಾಲಗೊಂದು ತೊಟ್ಟಿಲ ಕಟ್ಟಿ
ಬಾಲಯ್ಯ ಬಾಲ ಅಳದೀರೊ । ಬೈಗೀನ ಕಡೇಲಿ
ಅಂಗುಳಾರಿದರೆ ನಿಂಗೆ ಮೊಲೆಯಿಲ್ಲ ॥
ನಿಂಬೆಯ ಮರಕ ಬಾಲಗೊಂದು ತೊಟ್ಟಿಲ ಕಟ್ಟಿ
ಕಂದಯ್ಯ ಕಂದ ಅಳದೀರೋ । ಬೈಗೀನ ಕಡೇಲಿ
ಅಂಗುಳಾರಿದರೆ ನಿಂಗೆ ಮೊಲೆಯಿಲ್ಲ ॥

ಎರಡು ಮಕ್ಕಳನ್ನು ನಿಂಬೆಯ, ಬಾಳೆಯ ಮರಗಳಿಗೆ ಕಟ್ಟಿದ ತೊಟ್ಟಿಲುಗಳಲ್ಲಿ ಹಾಕಿ ತೂಗಿ, ಮನದಣಿಯೇ ಜೋಗುಳ ಹಾಡಿ, ನಾಳೆ ಬೆಳಗಾದೊಡನೆ ನಿಮ್ಮ ಆರಿದ ಬಾಯಿಗೆ ಹಾಲು ಕೊಡುವ ತಾಯಿ ನಾನಿರುವದಿಲ್ಲವೆಂದು ದುಃಖಪಟ್ಟು ಅವನ್ನು ಪ್ರಕೃತಿಗೆ ಒಪ್ಪಿಸಿ ಅತ್ತೆ ಮಾವಂದಿರಿಗೆ ನಮಸ್ಕರಿಸಿ ಅರಿಷಣ ಗಂಬಿ ಸೀರೆ ಉಟ್ಟು, ಕೈಯಲ್ಲಿ ನಿಂಬೆಹಣ್ಣು ಕನ್ನಡಿ ಹಿಡಿದು ಸಹಗಮನಕ್ಕೆ ಸಿದ್ಧಳಾದಳು. ಉರಿಯುತ್ತಿರುವ ಕೊಂಡ ತನ್ನ ಒಡಲಲ್ಲಿ ಹತ್ತಿ ಉರಿಯುತ್ತಿರುವ ಕಿಚ್ಚನ್ನು ಸೋಲಿಸಲಾರದೆ ಹೋದರೆ? ಎಂಬ ಸಮಸ್ಯೆ ಬಂದಾಗ, ಒಂದು ಅತ್ತಿಮರವನ್ನು ಕಡಿಸಿ ಕೊಂಡಕ್ಕೆ ಹಾಕಿಸಿಕೊಂಡು ಮಡಿದ ಪತಿಯೊಂದಿಗೆ ಸಹಗಮನ ಹೊಂದಿದಳು. ಬಹುಶಃ ಮಹಾಸತಿಯಾದ ತಿಪ್ಪವ್ವನ ಕೊಂಡದ ಆಳತೆಗೆ ತಕ್ಕಂತೆ ಒಂದು ಜಗುಲಿಯನ್ನು

ಕಟ್ಟಿರಬಹುದು. ಅದರ ಸಮೀಪದಲ್ಲಿಯೇ ಅವಳ ಮಾಸ್ತಿ ಕಲ್ಲು ಬಿದ್ದಿದೆ.

ಬಯಲುಸೀಮೆಯ ಲಾವಣಿ[೪೮]ಗಳಲ್ಲಿ ಬರುವ ಪಡ್ಮಗೆರೆ ನಾಗಮ್ಮ ಸಹಗಮನ ಹೊಂದಿ ಮಹಾಸತಿಯಾದ ಉಲ್ಲೇಖವೊಂದಿದೆ. ಪತಿಯ ಮರಣಾನಂತರ ನಾಗಮ್ಮ ತನ್ನ ತವರಿನವರು, ಗಂಡನಮನೆಯವರು ಸುಖವಾಗಿ ಬಾಳಲೆಂದು ಬಲಿಗೈ ಎತ್ತ ಹಾಕೈಸಿ, ತನಗೊಂದು ಗುಡಿ ಕಟ್ಟಬೇಕೆಂದು ಕೇಳಿಕೊಂಡು ಮಹಾಸತಿಯಾಗುತ್ತಾಳೆ.

ಈ ಸಹಗಮನ ಪ್ರಸಂಗಗಳು ಜನತೆಯ ಮನದಾಳದಲ್ಲುಳಿದು ಜಾನಪದ ಕಥನಗೀತಗಳಾಗಿ ಹೊರಹೊಮ್ಮಿ ಇಂದಿಗೂ ಜೀವಂತವಾಗಿ ಉಳಿದುಕೊಂಡು ಬಂದಿರುವುದನ್ನು ಮನಗಾಣಬಹುದು.

**ಪ್ರವಾಸ ಸಾಹಿತ್ಯ :** ಶಾಸನ ಮತ್ತು ಕಾವ್ಯಗಳಷ್ಟೇ ನಿಖರವಾಗಿ ಈ ಸಂಪ್ರದಾಯವನ್ನು ತಿಳಿಸುವ ಇನ್ನುಳಿದ ಆಕರಗಳಲ್ಲಿ ವಿದೇಶಿ ಪ್ರವಾಸಿಗರ ದಿನಚರಿಗಳು ಪ್ರಮುಖವಾದುವು.

ಅಲೆಕ್ಸಾಂಡರ ಭಾರತಕ್ಕೆ ಬಂದ ಸಮಯದಲ್ಲಿ ನಡೆದ ಒಂದು ಸಹಗಮನ ಪ್ರಸಂಗವನ್ನು ಡಿಯೋಡೊರಸ್ ಸಿಕ್ಯುಲಸ್ ಎಂಬ ಪ್ರವಾಸಿ ತಿಳಿಯಪಡಿಸುತ್ತಾನೆ[೪೯]

ಕೆಟಿಯಾಸ ಮಡಿದಾಗ ಗರ್ಭಿಣಿಯಾದ ಅವನ ಹಿರಿಯ ಮಡದಿಗೆ ಸಹಗಮನ ಹೊಂದಲು ಅನುಮತಿ ದೊರಕಲಿಲ್ಲ.

ಸಹಗಮನಕ್ಕೆ ಅನುಮತಿ ಪಡೆದ ಕಿರಿಯ ಪತ್ನಿ ಮದುವಣಗಿತ್ತಿಯಂತೆ ಶೃಂಗರಿಸಿಕೊಂಡು ವಾದ್ಯಸಮೇತ ಬಂದು ತನ್ನ ಆಭರಣಗಳನ್ನೆಲ್ಲ ದಾನಮಾಡಿ, ಅಗ್ನಿಗೆ ಮೂರುಬಾರಿ ವಂದಿಸಿ ಮಡಿದ ಗಂಡನ ಪಕ್ಕದಲ್ಲಿ ಮಲಗಿ ಅಗ್ನಿಯಲ್ಲಿ ಒಂದಾಗುತ್ತಾಳೆ.

ಕ್ರಿ. ಶ. ೧೪ನೆಯ ಶತಮಾನದಲ್ಲಿ ಭಾರತಕ್ಕೆ ಬಂದ ಪ್ರವಾಸಿ ಫ್ರೈಯರ್ ಒಡೊರಿಕ್ ಸಹಗಮನದ ಬಗೆಗೆ ತಿಳಿಯಪಡಿಸಿದ ಮಾಹಿತಿಗಳಿವು :[೫೦]

'ಇಲ್ಲಿಯ ಒಂದು ಪೈಶಾಚಿಕ ಪದ್ಧತಿ, ಸತ್ತವನನ್ನು ಸುಡುವುದರ ಜೊತೆಗೆ ಅವನ ಬದುಕಿರುವ ಹೆಂಡತಿಯನ್ನು ಸುಡುತ್ತಾರೆ. ಇದಕ್ಕೆ ಕೊಡುವ ಕಾರಣವೇನಂದರೆ ಸತ್ತವನು ಇನ್ನೊಂದುಸಲ ಜನ್ಮವೆತ್ತಿದಾಗ ಅವನ ಹೆಂಡತಿಯೂ ಅವನೊಡನೆ ಜನ್ಮವೆತ್ತಲಿ ಎಂದು. ಸತ್ತವನ ಹೆಂಡತಿಗೆ ಮಕ್ಕಳಿದ್ದರೆ ಆಕೆ ತನ್ನಿಷ್ಟದಂತೆ ಮಾಡಬಹುದು. ಆದರೆ ಬಹುಮಂದಿ ಗಂಡನ ಜೊತೆಯಲ್ಲಿಯೇ ಬಿದ್ದು ಸಾಯುವುದನ್ನು ಅಪೇಕ್ಷೆಪಡುತ್ತಾರೆ'.

ಇಬ್ನೆ ಬತುತಾ ಎಂಬ ಉತ್ತರ ಆಫ್ರಿಕದ ಮೊರಾಕೋ ದೇಶದ ಪ್ರವಾಸಿ ಸಹಗಮನದ ಸುಂದರ ದೃಶ್ಯವೊಂದನ್ನು ಹೀಗೆ ಕೊಡುತ್ತಾನೆ :[೫೧]

'ಯುದ್ಧದಲ್ಲಿ ಸತ್ತ ಮೂವರು ಯೋಧರ ಹೆಂಡತಿಯರು ದಹನಮಾಡಿಕೊಳ್ಳಲು ಹೊರಟಿದ್ದರು. ಅವರು ಅಲಂಕಾರ ಮಾಡಿಕೊಂಡು ಸುಗಂಧದ್ರವ್ಯಗಳನ್ನು ಪೂಸಿಕೊಂಡು ಕುದುರೆ

ಗಳನ್ನೇರಿದ್ದರು ಒಂದು ಕೈಯಲ್ಲಿ ತೆಂಗಿನಕಾಯನ್ನು ಆಡಿಸುತ್ತ, ಇನ್ನೊಂದು ಕೈಯಲ್ಲಿರುವ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುತ್ತಿದ್ದರು. ಸುತ್ತುಮುತ್ತ ವಾದ್ಯಗಳ ಜಯಘೋಷ, ನೆಂಟರಿಷ್ಟರು, ಬ್ರಾಹ್ಮಣರ ಬಳಗ ತುಂಬಿದ್ದಿತು. ಪ್ರತಿಯೊಬ್ಬ ಹಿಂದುವೂ 'ಅಗಲಿದ ನಮ್ಮ ಅಪ್ಪ ಅಮ್ಮನಿಗೆ ನಮಸ್ಕಾರ ಹೇಳು,' 'ನನ್ನ ಸ್ನೇಹಿತರಿಗೆ ನನ್ನ ಯೋಗಕ್ಷೇಮ ತಿಳಿಸು' ಎಂದು ಅವರಿಗೆ ಹೇಳುತ್ತಿದ್ದರು ಇವರು ಹೇಗೆ ದಹನ ಮಾಡಿಕೊಳ್ಳುತ್ತಾರೆಂದು ನೋಡಲು ನಾನೂ ಹೋದೆ ಮೂರು ಮೈಲಿ ಹೋದ ಮೇಲೆ ಯಥೇಚ್ಛವಾಗಿ ನೀರು, ನೆರಳು ಇರುವ ಸ್ಥಳದಲ್ಲಿ ನಾಲ್ಕು ವೇದಿಕೆಗಳನ್ನು ನೋಡಿದೆ. ಪ್ರತಿಯೊಂದರ ಮೇಲೂ ಕಲ್ಲಿನ ವಿಗ್ರಹಗಳಿದ್ದುವು. ವೇದಿಕೆಗಳ ಬಳಿಯ ಕೊಳದಲ್ಲಿ ನೀರು ತುಂಬಿತ್ತು. ಸೂರ್ಯರಶ್ಮಿಯೂ ಬೀಳದಷ್ಟು ಒತ್ತಾಗಿದ್ದ ಆ ನೆರಳಿನಿಂದ ಆ ಸ್ಥಳ ನರಕದಂತೆ ಕಾಣುತ್ತಿತ್ತು. ಆ ಕೊಳದಲ್ಲಿ ಸ್ನಾನಮಾಡಿದ ಸ್ತ್ರೀಯರು ತಮ್ಮ ಮೈಮೇಲಿದ್ದ ಬಟ್ಟೆಬರೆಗಳನ್ನು ಒಡವೆಗಳನ್ನು ಕಳಚಿ ದಾನಮಾಡಿದರು. ಅನಂತರ ಹೊಲಿಯದೆ ಇದ್ದ ಒಂದು ಬಟ್ಟೆಯಿಂದ ಮೈಮುಚ್ಚಿಕೊಂಡರು ವೇದಿಕೆಯ ಮಧ್ಯ ತೋಡಿದ್ದ ಗುಂಡಿಗಳಲ್ಲಿ ಬೆಂಕಿ ಉರಿಯುತ್ತಿತ್ತು. ಹಲವರು ಎಳ್ಳೆಣ್ಣೆಯನ್ನು ಸುರಿದು ಉರಿಯನ್ನು ಹೆಚ್ಚಿಸುತ್ತಿದ್ದರು. ಇಪ್ಪತ್ತೈದುಜನರು ಆ ಕುಂಡಗಳ ಬಳಿ ಸಣ್ಣ ಸಣ್ಣ ಕಟ್ಟಿಗೆಗಳನ್ನು, ದೊಡ್ಡ ದೊಡ್ಡ ಮರದ ತುಂಡುಗಳನ್ನು ಹಿಡಿದು ನಿಂತಿದ್ದರು. ವಾದ್ಯಘೋಷ ಸಾಗುತ್ತಿತ್ತು. ಮಹಾಸತಿಯಾಗುವವರಿಗೂ ಬೆಂಕಿಗೂ ಮಧ್ಯೆ ಗಂಡಸರು

ಒಂದು ಪರದೆ ಹಿಡಿದು ನಿಂತಿದ್ದರು — ಸ್ತ್ರೀಯರು ಬೆಂಕಿಯನ್ನು ನೋಡಿ ಹೆದರಿಕೊಳ್ಳದಿರಲಿ ಎಂದು. ಸ್ತ್ರೀಯರಲ್ಲಿ ಒಬ್ಬಳು ಪರದೆಯನ್ನು ಕಿತ್ತು ಬೀಸಾಡಿ ನಗುತ್ತಾ 'ನಾನು ಬೆಂಕಿಗೆ ಹೆದರುವೆನೆಂದು ಭಾವಿಸಿದಿರಾ, ಅದು ಬೆಂಕಿ ಎಂದು ನನಗೆ ಗೊತ್ತು. ನನ್ನನ್ನು ನನ್ನ ಪಾಡಿಗೆ ಬಿಡಿ' ಎಂದು ಹೇಳಿ ಬೆಂಕಿಗೆ ವಂದಿಸಿ ಕುಂಡದೊಳಗೆ ಧುಮುಕಿದಳು. ಉಳಿದವರೂ ಅದೇ ರೀತಿ ಮಾಡಿದರು. ತಾಳ ಮದ್ದಳೆಗಳು ಬಾರಿಸತೊಡಗಿದವು. ಗಂಡಸರು ಅವರು ಅಲುಗಾಡದಿರುವಂತೆ ಕಟ್ಟಿಗೆ ತುಂಡುಗಳನ್ನು ಹೇರಿದರು. ಅವರು ಉರಿಯುವ ಅಗ್ನಿಯಲ್ಲಿ ಒಂದಾದರು.

ಇದರಂತೆ ಇಲ್ಲಿಯೇ ನಡೆದ ಮತ್ತೊಂದು ಸಹಗಮನದ ಚಿತ್ರವನ್ನು ಇಬ್-ನೆ-ಬತುತಾ ಕೊಡುತ್ತಾನೆ.[೫೭]

'ಇಲ್ಲಿ ಹಿಂದೂ ಸ್ತ್ರೀಯೊಬ್ಬಳು ಸತ್ತ ತನ್ನ ಗಂಡನೊಡನೆ ಸಹಗಮನ ಮಾಡಿದಳು. ಚಿತೆಯನ್ನೇರುವ ಹಿಂದೂ ಸ್ತ್ರೀ ಅಲಂಕಾರ ಮಾಡಿಕೊಂಡು ಕುದುರೆಯ ಮೇಲೆ ಹೊರಡುತ್ತಾಳೆ. ಅವಳನ್ನು ಮುಸಲ್ಮಾನರೂ ಹಿಂದುಗಳೂ ತಾಳಮೇಳ ಸಮೇತ ಹಿಂಬಾಲಿಸುತ್ತಾರೆ. ಆಕೆಯನ್ನು ನೋಡಬೇಕಾದರೆ ಸುಲ್ತಾನನ ಅಪ್ಪಣೆ ಪಡೆಯಬೇಕು. ಗಂಡ ಸತ್ತಮೇಲೆ ಹೆಂಡತಿಯು ಚಿತೆಯಲ್ಲಿ ಬೀಳುವುದು ಬಹಳ ಮೆಚ್ಚಿನ ಕೆಲಸವೆಂದು ಭಾವಿಸುತ್ತಾರೆ. ಆದರೆ ಬಲಾತ್ಕಾರವಿಲ್ಲ. ವಿಧವೆಯಾದವಳು ಈ ರೀತಿ ದಹನಮಾಡಿಕೊಂಡರೆ ಆಕೆಯ ಮನೆತನದ ಹೆಸರು ಹೆಚ್ಚುತ್ತದೆಯಲ್ಲದೆ ಆಕೆ ಪತಿವ್ರತೆಯೆಂಬ ಹೆಸರು ಪಡೆಯುತ್ತಾಳೆ.

ಹೀಗೆ ದಹನ ಮಾಡಿಕೊಳ್ಳದವಳು ಒರಟು ಬಟ್ಟೆಗಳನ್ನು ಧರಿಸಿ ತನ್ನ ಮನೆಯವರೊಡನೆ ನೆರೆಹೊರೆಯವರ ಚುಚ್ಚುಮಾತುಗಳಿಗೊಳಗಾಗಿ ಕಷ್ಟದಲ್ಲಿ ಬಾಳಬೇಕಾಗುತ್ತದೆ'

೧೬ನೆಯ ಶತಮಾನದಲ್ಲಿ ಬಂದ ಪೋರ್ತುಗೀಸ್ ಪ್ರವಾಸಿ ದು ಆರ್ತೆ ಬಾರ್ಬೋಸಾನ ದಿನಚರಿಯ ಮಾಹಿತಿಯಲ್ಲಿ ಸಹಗಮನದ ಚಿತ್ರವೊಂದು ಇಂತಿದೆ:[೫೩]

'ಗಂಡ ಸತ್ತಾಗ ಹೆಂಡತಿಯು ಸಹಗಮನ ಮಾಡಲೇಬೇಕು ಇದನ್ನು ಪತಿಭಕ್ತಿ ಎಂದು ಭಾವಿಸುತ್ತಾರೆ. ಬಡವಳಾದವಳು ತನ್ನ ಆತ್ಮಸಂತೋಷದಿಂದ ಪತಿಯೊಡನೆ ಪ್ರಾಣತ್ಯಾಗ ಮಾಡಿದರೆ, ಅನುಕೂಲಸ್ಥಳಾದವಳು ಚಿತೆಗೆ ಬೀಳುವ ಮುನ್ನ ನೆಂಟರಿಷ್ಟರನ್ನೆಲ್ಲ ಸೇರಿಸಿ ಊಟೋಪಚಾರ ಮಾಡಿಸಿ ಕುದುರೆಯ ಮೇಲೆ ಮೆರವಣಿಗೆ ಹೊರಡುತ್ತಾಳೆ. ಕುದುರೆ ಬೂದುಬಣ್ಣದ್ದಿರಬೇಕು ಅಥವಾ ಬಿಳಿಯ ಬಣ್ಣದ್ದಿರಬೇಕು. ಕುದುರೆ ಏರಿ ಮೆರವಣಿಗೆ ಸಹಿತ ಚಿತೆಯ ಬಳಿ ಹೋಗಿ ಪೂರ್ವಾಭಿಮುಖವಾಗಿ ನಿಂತು ಮೂರು ಸಲ ನಮಸ್ಕರಿಸುತ್ತಾಳೆ. ಆಮೇಲೆ ತಾನು ತೊಟ್ಟ ಆಭರಣಗಳನ್ನೆಲ್ಲ ತನ್ನ ನೆಂಟರಿಷ್ಟರಿಗೆ ಹಂಚುತ್ತಾಳೆ. ಕೊನೆಗೆ ಸೊಂಟಕ್ಕೆ ಸುತ್ತಿದ್ದ ಬಟ್ಟೆ ಮಾತ್ರ ಉಳಿಯುತ್ತದೆ. ಆ ಸ್ಥಿತಿಯಲ್ಲಿ ಆಕೆ ಗಂಡಸರನ್ನು ಕುರಿತು 'ನೋಡಿ ಗಂಡನೊಡನೆ ಸಾಯುವ ಹೆಂಗಸಿಗೆ ನೀವೆಷ್ಟು ಕೃತಜ್ಞರಾಗಿರಬೇಕು' ಎಂದು ಹೇಳುತ್ತಾಳೆ. ಹೆಂಗಸರನ್ನು ಕುರಿತು 'ನಿಮ್ಮ ಪತಿಭಕ್ತಿ ಎಷ್ಟಿರಬೇಕು ಎಂಬುದನ್ನು ನೆನೆಸಿಕೊಳ್ಳಿ, ನನ್ನಂತೆ ನೀವೂ ನಿಮ್ಮ ಪತಿಯನ್ನು ಅನುಸರಿಸಬೇಕು' ಎನ್ನುತ್ತಾಳೆ.

ಇಷ್ಟು ಹೇಳಿದ ಮೇಲೆ ಅವಳ ಕೈಗೆ ಎಣ್ಣೆಯ ಗಡಿಗೆ ಕೊಡುತ್ತಾರೆ. ಆಕೆ ಅದನ್ನು ತಲೆಯ ಮೇಲಿಟ್ಟುಕೊಂಡೇ ದೇವರಿಗೆ ಪ್ರಾರ್ಥನೆ ಸಲ್ಲಿಸಿ ಚಿತೆಯನ್ನು ಮೂರುಸಲ ಪ್ರದಕ್ಷಿಣೆ ಮಾಡಿ ಪೂರ್ವಾಭಿಮುಖವಾಗಿ ನಿಂತು ವಂದನೆಗೈಯುತ್ತಾಳೆ. ಆಮೇಲೆ ಗಡಿಗೆಯ ಎಣ್ಣೆಯನ್ನು ಉರಿಯುವ ಚಿತೆಗೆ ಸುರಿದು ಗಡಿಗೆಯನ್ನು ಅದರೊಳಗೆ ಎಸೆದು ತಾನೂ ಧುಮುಕುತ್ತಾಳೆ. ಸತ್ತ ನೆರೆದ ನೆಂಟರಿಷ್ಟರು ತಮ್ಮ ಕೈಯಲ್ಲಿ ಹಿಡಿದಿರುವ ಎಣ್ಣೆ, ತುಪ್ಪ, ಒಣಸೌದೆಗಳನ್ನು ಆಕೆಯ ಮೇಲೆ ಹಾಕುತ್ತಾರೆ. ಆ ಅಗಾಧ ಜ್ವಾಲೆ ಒಂದರಗಳಿಗೆಯಲ್ಲಿ ಅವಳನ್ನು ಸುಟ್ಟು ಭಸ್ಮ ಮಾಡುತ್ತದೆ'.

ಬಹುಪತ್ನಿ ಸಹಗಮನದ ವಿಷಯವನ್ನು ತಿಳಿಸುತ್ತ ದು ಆರ್ತೆ ಬಾರ್ಬೋಸಾ,

'ರಾಜ ಸತ್ತರೆ ಅವನ ಅಂತಃಪುರದ ನಾನೂರು ಐನೂರು ಸ್ತ್ರೀಯರೂ ಅವನೊಡನೆ ಚಿತೆಯಲ್ಲಿ ಬೀಳುತ್ತಾರೆ. ಇಷ್ಟು ಜನರ ಅನುಕೂಲಕ್ಕಾಗಿ ಚಿತೆಯ ಗುಂಡಿಯನ್ನು ದೊಡ್ಡದು ಮಾಡಿರುತ್ತಾರೆ. ಶ್ರೀಗಂಧ ಮುಂತಾದ ಮರಗಳನ್ನು ಎಣ್ಣೆ ತುಪ್ಪಗಳನ್ನು ಹೇರಳವಾಗಿ ಶೇಖರಿಸುತ್ತಾರೆ. ಆ ಚಿತೆಯಲ್ಲಿ ಬೀಳುವುದಕ್ಕೆ ನಾ ಮುಂದು ತಾಮುಂದು ಎಂದು ನುಗ್ಗುತ್ತಾರೆ. ರಾಜನ ಅನೇಕ ಅನುಚರರೂ ಇದೇ ರೀತಿ ರಾಜ ಸತ್ತಾಗ ಚಿತೆಯಲ್ಲಿ ಬಿದ್ದು ಸಾಯುತ್ತಾರೆ' ಎಂದು ತಿಳಿಯಪಡಿಸುತ್ತಾನೆ. ಹೀಗೆ ಭಾರತೀಯ ಸತಿಪದ್ಧತಿಯ ಇತಿಹಾಸವನ್ನು ಅನೇಕ ಪ್ರವಾಸಿಗಳು ತಮ್ಮ ದಿನಚರಿಗಳ ಮೂಲಕ ಒದಗಿಸಿದ್ದಾರೆ.

ಈ ಸಹಗಮನ ಪದ್ಧತಿ ಜೈನಧರ್ಮಕ್ಕೆ ಮಾನ್ಯವಾಗಿರಲಿಲ್ಲ. ಸ್ತ್ರೀಯರ ಬಲಿದಾನ, ಸಮಾಧಿಮರಣದಂತಹ ರಾಜಮಾರ್ಗವನ್ನು ಆರಿಸಿಕೊಂಡಿತ್ತು. ಕಾರಣ ಜೈನಕವಿಗಳು ಈ ಸಹಗಮನ ಪದ್ಧತಿಯನ್ನು

ಪುರುಷರ ಪರೋಕ್ಷದೊಳ್ಸಿರ
ಗಿರದಾಗಡೆ ಸತ್ತಳಪ್ಪೊಡಾಕೆಗೆ ಸಗ್ಗಂ
ದೊರಕೊಳ್ಗುಮೆಂಬ ದುರ್ಜೋ
ಧರ ಮಾತಂ ಕೇಳ್ದು ನಂಬಿ ಕಿಚ್ಚಂ ಪುಗುವರ್[೫೪]

ಎಂದು ಜೈನ ಬ್ರಹ್ಮಶಿವ ಸಮಯಪರೀಕ್ಷೆಯಲ್ಲಿ ಈ ಹಿಂದೂ ಆಚರಣೆಯನ್ನು ನಿಂದಿಸಿದ್ದಾನೆ ಇದಲ್ಲದೆ

'ಪುರುಷಂ ಸತ್ತಡೆ ಪುತ್ರನುಳ್ಳವರು ಸಾಯಲ್ವೇಡ ಸಲ್ಲ
ದೆಂಬರ್ದ್ಧರಾ
ಮರರ್ಕಾಗಮ ನಿಯಮವಾಗಿ ಧನಮಂ
ನಿಃಪುತ್ರನಾವಾಗಳಾ
ದರದಿಂ ತವಗಿತ್ತು ಸಾವಡೆನತುಂ ಸಾಯಲ್ಕೆ
ಪೇಳ್ದವರ್ಗಹಾ
ಪುರುಷರ್ಸತ್ತಡೆ ಬದ್ದರೊಂದೊಡೆಮೆಯಂ
ಕೊಳುವೊಂದುಪಾಯಮಿಗ್ರಗರ್'[೫೫]

ಎಂದು ಹೇಳುತ್ತ 'ಸಪುತ್ರಕ ವಿಧವೆಗೆ ಅಗ್ನಿಪ್ರವೇಶ ನಿಷಿದ್ಧವಾದುದು. ಅಪುತ್ರಕ ವಿಧವೆಗೆ ಅಗ್ನಿಪ್ರವೇಶ ನಿಯತ' ಎಂದು ಹೇಳುವವರು ಅವರ ಆಸ್ತಿಯನ್ನು ಎತ್ತಿ ಹಾಕಲು ಪ್ರಯತ್ನಿ .

ಸುವ ಕಪಟರು, ಎಂದು ಖಂಡಿಸುವುದರ ಮೂಲಕ ಸಹಗಮನ ಪದ್ಧತಿಯಲ್ಲಿ ಹುದುಗಿದ್ದ ಶೋಷಣೆಯನ್ನು ಸರಿಯಾಗಿಯೇ ಸೂಚಿಸಿದ್ದಾನೆ

**ವದಂತಿ ಸಾಹಿತ್ಯ** : ಕ್ರಿ. ಶ. ೧೫೨೬ರ ವಿಜಯನಗರದ ಕೃಷ್ಣದೇವರಾಯನ ಆಳಿಕೆಯಲ್ಲಿ ಘಟಿಸಿದ ಸಹಗಮನ ಪ್ರಸಂಗ ವೊಂದರ[೫೬] ಸಂಗತಿ ಹೀಗಿದೆ:

ವಿಜಯನಗರದ ಕೃಷ್ಣದೇವರಾಯನ ಅಧಿಕಾರಿ ಸಾಳುವ ತಿಮ್ಮನಾಯಕ ಬೆಳಗಾವಿಯ ಆಡಳಿತವನ್ನು ನೋಡಿಕೊಳ್ಳು ತ್ತಿದ್ದ ಈ ಸೀಮೆಯಲ್ಲಿ ಕುಂಚನೂರು ಒಂದು ಸಾಮಾನ್ಯ ಹಳ್ಳಿ. ಇಲ್ಲಿಯ ಕೆಂಚಗೊಂಡ ಲಕ್ಕಬ್ಬೆಯರ ಏಕೈಕಪುತ್ರ ರಾಯಗೊಂಡ ಈತನ ಹೆಂಡತಿ ಲಕ್ಕಬ್ಬೆಯ ತವರುಮನೆಯ ವೀರೋತ್ಸಾಹದ ಮಡಿಲಲ್ಲಿ ಬೆಳೆದ ನಾಗಲಬ್ಬೆಗೆ ಪತಿಯ ವೀರೋಚಿತವಲ್ಲದ ವ್ಯಕ್ತಿತ್ವ ವಿಷಾದವನ್ನುಂಟು ಮಾಡತೊಡ ಗಿತು. ಇದನ್ನರಿತ ರಾಯಗೊಂಡ ವೀರೋಚಿತಕಾರ್ಯ ಕಲಾಪಗಳಲ್ಲಿ ನಿಷ್ಠಾವಂತನಾಗಿ ನಾಗಲಬ್ಬೆಯ ಪ್ರೀತಿಯನ್ನು ಸಂಪಾದಿಸಿದ.

ಬೆಳಗಾವಿಯನ್ನು ಮುತ್ತಲು ಹೊರಟ ವಿಜಾಪುರದ ಸುಲ್ತಾನನ ಸರದಾರ ಅಸದ್ ಖಾನನನ್ನು ಎದುರಿಸಲು ಬೇಕಾದ ಸೈನ್ಯ ಸಂಗ್ರಹದ ರಾಯಸದ ಮೇರೆಗೆ ಕುಂಚನೂರಿನ ನೂರು ವೀರತರುಣರ ನಾಯಕನಾಗಿ ರಾಯಗೊಂಡ ಯುದ್ಧಕ್ಕೆ ಹೋದ ಅಸದ್ ಖಾನನ ಸೈನ್ಯ ಕಂಗೆಟ್ಟುಹೋದ ಸುದ್ದಿ ಕುಂಚನೂರಿಗೆ

ಬರಲು ನಾಗಲಬ್ಬೆ ವೀರನ ಪತ್ನಿಯೆಂಬ ಹೆಮ್ಮೆಯಿಂದ, ಕೆಂಚಗೊಂಡ ಲಕ್ಕಬ್ಬೆಯರು ವೀರನ ತಂದೆ ತಾಯಿಗಳೆಲ್ಲ ಅಭಿಮಾನದಿಂದ ಉಬ್ಬಿಹೋದರು. ಮರುಕ್ಷಣದಲ್ಲಿಯೇ ಬಂದ ರಾಮಗೊಂಡನ ಮರಣವಾರ್ತೆಯನ್ನು ಕೇಳಿ ನಾಗಲಬ್ಬೆ ಸಹಗಮನದ ಸಿದ್ಧತೆಗೆ ತೊಡಗಿದಳು. ರುದ್ರವಾದ್ಯಗಳೊಂದಿಗೆ ಬಂದ ನಾಗಲಬ್ಬೆ ಚಿತೆಗೆ ಮೂರು ಬಾರಿ ಬಲವಂದು ಅಳುತ್ತಿದ್ದ ಬಂಧು ಬಾಂಧವರಿಗೆ ಕಂಕಣದ ಕೈ ಎತ್ತಿ ಸಮಾಧಾನ ಹೇಳಿ ಉರಿಯುವ ಅಗ್ನಿಯಲ್ಲಿ ಒಂದಾದಳು

ಮೂರನೆಯ ದಿನ ಅವಳು ಸತಿಯಾದ ಸ್ಥಾನದಲ್ಲಿ ದಹಿಸದೇ ಉಳಿದ ಕೈಯ ಕಂಕಣಗಳು ಮಾವ ಕೆಂಚಗೊಂಡನಿಗೆ ಲಭಿಸಿದವು. ಅವುಗಳನ್ನು ಜಗುಲಿಯ ಮೇಲಿಟ್ಟು ಪೂಜಿಸತೊಡಗಿದರು. ಆ ವಂಶದವರು ಇಂದಿನವರೆಗೂ ಬೆಳ್ಳಿಯ ಹಸ್ತಕ್ಕೆ ಆ ಕಂಕಣಗಳನ್ನು ತೊಡಿಸಿ ಪೂಜಿಸುವುದರ ಮೂಲಕ ಅವುಗಳನ್ನು ಕಾಪಾಡಿಕೊಂಡು ಬಂದಿದ್ದಾರೆ.

## ೪. ಮಾಸ್ತಿಕಲ್ಲು

ಸ್ವರ್ಗದಲ್ಲಿದ್ದ ತಮ್ಮ ಪತಿಗಳಿಗೆ ಅಗ್ನಿಪ್ರವೇಶದ ಮೂಲಕ ಆತ್ಮವನ್ನು ಅರ್ಪಿಸಿದ ಈ ಮಹಾಸತಿಯರ 'ಸಹಗಮನ'ವನ್ನು ಶಾಸನಗಳಲ್ಲಿ ತೋಳುಕಬುಗೊಡು, ಸಹಾನುಭೂತಿ ಹೊಂದು, ಸಹಸಂಗತಿಯಿಡಿ, ಅಗ್ನಿಪ್ರವೇಶಮಾಡು ಎಂಬ ಹಲವಾರು

ಪದಗಳಿಂದ ಸೂಚಿಸಿದ್ದಾರೆ. ಹಳ್ಳಿಗಳಲ್ಲಿ ಈ ಸ್ಮಾರಕಶಿಲೆಗಳಿಗೆ ಮಾಸ್ತಿಕಲ್ಲು ಇಲ್ಲವೆ ವ್ಯಾಸನ ತೋಳು* ಎಂದು ಕರೆಯುತ್ತಾರೆ.

ಬೇರೆಬೇರೆ ಆಕಾರಗಳಲ್ಲಿ ದೊರಕುವ ಈ ಮಾಸ್ತಿಕಲ್ಲುಗಳನ್ನು ನಿಲ್ಲಿಸಿದವರು ಸಹಗಮನ ಹೊಂದಿದ ಸತಿಯ ತಂದೆ ತಾಯಿ ಅಥವಾ ಬಂಧು-ಬಳಗದವರು. ಬೆಳತೂರಿನ ಶಾಸನದಲ್ಲಿ ದೇಕಬ್ಬೆಯ ಸಹಗಮನದ ನಂತರ ಅವಳ ಸ್ಮಾರಕ ಮಾಸ್ತಿಕಲ್ಲನ್ನು ಅವಳ ತಂದೆ ಕುಡಿಯರ ವಲ್ಲಭ 'ಮಣ್ಣಲಕ್ಕೆಲ್ಲ ಪಡಿಛನ್ದಮಾಗಿ ಶಿಳಾಸ್ತಂಭ ಶಾಸನವಾಗೆ ನೆಟ್ಟ'ನೆಂದು ತಿಳಿದು ಬರುತ್ತದೆ.

ಸೊರಬದ ಶಾಸನವೊಂದರಲ್ಲಿ[೫೭] 'ಪತಿಯೊಡನೆ ಸಹಗಮನಹೊಂದಿದ ಜಕ್ಕಬ್ಬೆ ಎಂಬವಳಿಗೆ ಅವಳ ತಂಗಿ ಜಾಚಿಕಲ್ಲ ನಿಱಿಸಿದ' ಉಲ್ಲೇಖ ಕಂಡುಬರುತ್ತದೆ. ಅರುಹನಹಳ್ಳಿಯ ಕ್ರಿ. ಶ. ೧೪೩೦ ರ ಶಾಸನವೊಂದರಲ್ಲಿ[೫೮] ಸಹಗಮನ ಹೊಂದಿದ ಸತಿಯೊಬ್ಬಳಿಗೆ ಅವಳ ಮಗ ಬಸಪ್ಪ ಎಂಬವ ಮಾಸ್ತಿಕಲ್ಲನ್ನು ನಿರ್ಮಿಸಿದ ಉಲ್ಲೇಖ ಬರುವುದುಂಟು.

---

*. ದೇವತೆಗಳಲ್ಲಿ ವಿಷ್ಣುವೇ ಶ್ರೇಷ್ಠನೆಂದು ವ್ಯಾಸನು ಕೈ ಎತ್ತಿ ನುಡಿಯಲು ಶಿವನು ಆ ಕೈಯನ್ನು ಕತ್ತರಿಸಿದನೆಂದು ಶೈವಪುರಾಣಗಳ ಹೇಳಿಕೆ. ಶಿವನ ಪಾರಮ್ಯವನ್ನು ಪೋಷಿಸುವ ಶೈವರು ದೇವಸ್ಥಾನಗಳಲ್ಲಿ ಶಿವಲಿಂಗದ ಮುಂದೆ ವ್ಯಾಸನ ತೋಳಿನ ಪ್ರತಿರೂಪ ಕಟ್ಟುತ್ತಾರೆ. ಬರಬರುತ್ತ ಒಂದೇ ಕೈ ಇರುವ ಮಾಸ್ತಿಗೂ ವ್ಯಾಸನ ತೋಳು ಎಂದು ಕರೆಯತೊಡಗಿದರು.

ಬಲಗೈ ಮೇಲೆತ್ತಿದ ಚಿತ್ರ ಮಾಸ್ತಿಕಲ್ಲುಗಳಲ್ಲಿ ಸರ್ವ ಸಾಮಾನ್ಯ. ಕೆಲವೊಮ್ಮೆ ಆ ಕೈಯಲ್ಲಿ ಒಂದು ಲಿಂಬೆಹಣ್ಣು ಬಿಡಿಸಿರುತ್ತಾರೆ. ಒಂದು ಕೈ ಮೇಲಕ್ಕೆತ್ತಿದ ಚಿತ್ರ ಒಬ್ಬಳೇ ಸ್ತ್ರೀ ಸಹಗಮನ ಹೊಂದಿದ ದ್ಯೋತಕವಾದರೆ, ಅನೇಕ ಕೈಗಳು ಬಹುಪತ್ನಿಯರ ಸಹಗಮನದ ಸೂಚನೆಯಾಗಿರುತ್ತವೆ.

ಸಹಗಮನ ಹೊಂದಿದ ಸತಿಯ ಸಂಪೂರ್ಣಚಿತ್ರವನ್ನು ಬಿಟ್ಟಿದ ಕೂದಲು, ಅವರ ಹಿಂದೆ ಉರಿಯುವ ಜ್ವಾಲೆಯೊಂದಿಗೆ ಕೆಲವೊಮ್ಮೆ ಬಿಡಿಸಿರುತ್ತಾರೆ. ಕೆಲವೊಮ್ಮೆ ಸತಿಪತಿಗಳಿಬ್ಬರ ಚಿತ್ರವೂ ಇರುತ್ತವೆ. ಸತಿಯ ಚಿತ್ರ ದೊಡ್ಡದಾಗಿದ್ದರೆ ಪತಿಯ ಚಿತ್ರ ಮೂಲೆಯಲ್ಲಿ ಬಿಡಿಸಿರುತ್ತಾರೆ. ಇನ್ನು ಕೆಲವೊಮ್ಮೆ ಇದು ಮಾಸ್ತಿಕಲ್ಲಿನ ಕೆಳಹಂತವಾದರೆ ಮೇಲಿನ ಹಂತದಲ್ಲಿ ದೇವರ ಸಾನಿಧ್ಯದಲ್ಲಿ ಕಳಿತ ದಂಪತಿಗಳ ಚಿತ್ರವೂ ಇರಬಹುದು.

ಈ ಮಾಸ್ತಿಕಲ್ಲುಗಳನ್ನು ಸ್ವರೂಪದ ದೃಷ್ಟಿಯಿಂದ ನಾಲ್ಕು ಪ್ರಕಾರಗಳಾಗಿ ವರ್ಗೀಕರಿಸಬಹುದು.

೧. ಸಹಗಮನದ ಕುರುಹಾಗಿ ಕೇವಲ ಒಂದು ಕಲ್ಲನ್ನು ನೆಟ್ಟು ಪೂಜಿಸಬಹುದು.

೨. ಕೇವಲ ಸಹಗಮನ ಘಟನೆಯ ಬರೆಹದಿಂದ ಕೂಡಿದ ಶಿಲೆಯಿರಬಹುದು.

೩. ಕೇವಲ ಸಹಗಮನ ಹೊಂದಿದ ಸತಿಯ ಚಿತ್ರವಿರಬಹುದು.

೪ ಚಿತ್ರದ ಜೊತೆಗೆ ಸಹಗಮನ ವಿಷಯ ವಿವರಗಳ
ಗಳನ್ನೊಳಗೊಂಡ ಬರೆವಣಿಗೆ ಇರಬಹುದು.

ಮಾಸ್ತಿಕಲ್ಲುಗಳು ಶಿಲ್ಪಕಲೆಯ ದೃಷ್ಟಿಯಿಂದ ಸಾಧಾರಣ ಮಟ್ಟದವು. ಕಲಾಕೌಶಲದಿಂದ ಕೂಡಿದ ಮಾಸ್ತಿಕಲ್ಲುಗಳು ದೊರಕುವುದು ಅತ್ಯಂತ ಕಡಿಮೆ. ಕೇವಲ ಹಸ್ತಚಿತ್ರವಿದ್ದಲ್ಲಿ ಅಂಥ ಹೇಳಿಕೊಳ್ಳುವ ಕಲೆ ಇರುವುದಿಲ್ಲ. ಇಲ್ಲವೆ ದಂಪತಿಗಳ ಚಿತ್ರವಿದ್ದಲ್ಲಿ ಮಾತ್ರ ಕೆಲಮಟ್ಟಿಗೆ ಕಲಾಭಿಜ್ಞತೆ ಗೋಚರಿಸುತ್ತದೆ. 'ಬೊಮ್ಮನಹಳ್ಳಿಯ ಮಾಸ್ತಿಯೊಬ್ಬಳ ಹೆರಳು ಕೇದಿಗೆಯ ಗರಿಯಿಂದ ಸುಂದರವಾಗಿ ಹೆಣೆಯಲ್ಪಟ್ಟಿದ್ದು ಕೊನೆಗೆ ಕುಚ್ಚುಕಟ್ಟಿರುವ ರೀತಿ ಮೆಚ್ಚುವಂಥದ್ದು. ಇಂತಹ ಶಿಲ್ಪ ನನಗೆ ತಿಳಿದಮಟ್ಟಿಗೆ ಕರ್ನಾಟಕದಲ್ಲಿ ಮತ್ತೊಂದಿಲ್ಲ[೫೯]' ಎಂಬುದು ಡಾ. ಎಂ. ಚಿದಾನಂದಮೂರ್ತಿಯವರ ಅಭಿಪ್ರಾಯ. ದಂಪತಿಗಳ ಚಿತ್ರಕ್ಕೆ ಕಿತ್ತೂರಿನ ಮ್ಯೂಜಿಯಮ್‌ದಲ್ಲಿರುವ ಮಾಸ್ತಿಕಲ್ಲು ಉತ್ತಮ ಉದಾಹರಣೆಯಾಗಿದೆ. ಸಹಗಮನ ಹೊಂದಿದ ಮಹಾಸತಿಯರ ಅಂತಸ್ತನ್ನು ಅನುಸರಿಸಿ ಈ ಶಿಲ್ಪ ರೂಪತಾಳುತ್ತಿತ್ತು ಎಂಬ ಮಾತನ್ನು ಅಲ್ಲಗಳೆಯುವಂತಿಲ್ಲ.

ಶಿಲ್ಪದಂತೆ ಸಾಹಿತ್ಯದ ದೃಷ್ಟಿಯಿಂದಲೂ ಮಾಸ್ತಿಕಲ್ಲುಗಳಲ್ಲಿ ವಿಶೇಷತೆ ಕಂಡುಬರುವುದಿಲ್ಲ. ಆಡುಮಾತಿನ ಗದ್ಯದಲ್ಲಿ ಘಟನೆಯ ನಿರೂಪಣೆ ಮಾತ್ರ ಇಲ್ಲಿ ಕಾಣುತ್ತವೆ. ಉದಾ: ಶಕ ೧೩೦೪ನೆಯ ದುಂದುಭಿ ಸಂವತ್ಸರದ ಕಾರ್ತಿಕ ಬ ೬

ಬುಧವಾರ ಹನುಬರ ಸಂಗಿಯು ಕೇತಗೊಂಡನ ಮಗ ಬೋರ ಮಯ್ಯನು ಸತ್ತಂ ಆತನ ಹೆಂಡತಿ ಕಾಮಾಯಿ ಕಿಚಹಾಇದಲಿ ಆ ಕೇತೆಗೊಂಡನು ಅವರ ಯಿಬ್ಬರ ಹೆಸರಲಿ ಕಲ್ಲು ಕಟಿಸಿ ನಿಲಿಸಿದನು.[೬೦]

೩. ಸಕವರುಷ ೧೩೩೩ನೆಯ ವಿರೋಧಿ ಸಂವತ್ಸರ ಫಾಲ್ಗುಣ ಸುದ್ಧ ೭ ಆ ದೇವರಾಯನು ರಾಜ್ಯವನಾಳುವ ಕಾಲದಲಿ ಬೀಗೂರ ಬೊಮ್ಮಗವುಡನ ಮಗನು ಮಾದಪ್ಪನು ಸ್ವರ್ಗಸ್ತನಾದನು ಆತನ ಮಡವಳಿಗೆ ಮಸಣಕ್ಕೆ ಸಹಗಮನವ ಮಾಡಿದಳು[೬೧] ॥

ಈ ಮಾಸ್ತಿಕಲ್ಲುಗಳನ್ನು ಎಲ್ಲಿ ನೆಡಿಸುತ್ತಿದ್ದರು ಎಂಬುದರ ಬಗೆಗೆ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಚಿತೆಯನ್ನೇರಿದ ಸ್ಥಳದಲ್ಲಿ ನಿಲ್ಲಿಸುತ್ತಿದ್ದರೋ ಅಥವಾ ಅವಳ ಸಹಗಮನದ ಗುರುತಿಗಾಗಿ ಬೇರೆಡೆಯಲ್ಲಿ ನಿಲ್ಲಿಸುತ್ತಿದ್ದರೋ ಹೇಳುವುದು ಕಷ್ಟ. ಈಗ ಇವು ಸಾಮಾನ್ಯವಾಗಿ ಊರಿನ ಒಳಹೊರಗೆ ವಿಶೇಷವಾಗಿ ದೇವಸ್ಥಾನದ ಒಳಹೊರಗೆ ಗೋಚರಿಸುತ್ತವೆ. ಮಾಸ್ತಿಹಕ್ಕಲು ಎಂಬ ಒಂದು ಪ್ರದೇಶ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಮಾಲಂದೂರಲ್ಲಿದ್ದು, ಆ ಊರಿನವರು ಅಲ್ಲಿಯೇ ಸತಿಹೋದ ಸ್ತ್ರೀಯರ ಮಾಸ್ತಿಕಲ್ಲುಗಳನ್ನು ನೆಡುತ್ತಿರಬಹುದೇ ? ಎಂಬುದು ತಿ. ತಾ. ಶರ್ಮರ ಅಭಿಪ್ರಾಯ[೬೨]. ಆದರೆ ಈ ಕಲ್ಲುಗಳನ್ನು ಎಲ್ಲಿಯೇ ನೆಡಸಲಿ, ಜನತೆಯ ಭಕ್ತಿ, ಗೌರವಗಳು ಸದಾ ಅವುಗಳಿಗೆ ಮೀಸಲು.

ಪತಿಭಕ್ತಿಯ ಕುರುಹಾಗಿ ನಿಂತ ಈ ಮಹಾಸತಿಯರ ಸ್ಮಾರಕಗಳಿಗೆ ಜನತೆ ಭಕ್ತಿಯಿಂದ ಗುಡಿ ಕಟ್ಟಿಸಿ ಪೂಜಿಸುತ್ತಿದ್ದುದು ಮಹತ್ವದ ಸಂಗತಿ. ಚನ್ನಗಿರಿ ತಾಲೂಕಿನ ಕೊಂಡದಹಳ್ಳಿ,[೬೩] ಚಿಕ್ಕುಡೇವು[೬೪] ಗ್ರಾಮಗಳಲ್ಲಿ ಎರಡು ಮಾಸ್ತಿ ಗುಡಿಗಳಿವೆ ಇವಲ್ಲದೆ ಮಾಸ್ತಿಕಟ್ಟಾ, ಮಾಸ್ತಿಹೊಳಿ, ಮಾಸ್ತಮರಡಿ ಎಂಬ ಊರುಗಳು ಇದೇ ಹೆಸರು ಪಡೆದುಕೊಂಡಿದ್ದುದು ಗಮನಾರ್ಹ ಸಂಗತಿ.

ಮಾಸ್ತಿ ಹೊಂದಿದ ಸ್ತ್ರೀಯು ಖಡ್ಗವನ್ನೋ, ಕೈಯ ಕಂಕಣಗಳನ್ನೋ, ಬಟ್ಟೆಗಳನ್ನೋ ಹಲವು ಕಡೆಗೆ ಕಾಯ್ದಿಟ್ಟ ಉದಾಹರಣೆಗಳಿವೆ.

ಪತಿನಿಷ್ಠೆಯ ಹಿನ್ನೆಲೆಯಲ್ಲಿ ತಮ್ಮನ್ನು ತಾವು ಅಗ್ನಿಗೆ ಅರ್ಪಿಸಿಕೊಂಡು ಪ್ರಾಣತೆತ್ತ ಮಾಸ್ತಿಯರ ಕಲ್ಪನೆ ನೋಡುವವರ ಮನದಲ್ಲಿ, ಕೇಳುವವರ ಹೃದಯದಲ್ಲಿ ನೋವಿನ ಎಳೆಯಾಗಿ ನಿಲ್ಲಬಹುದು. ಆಧುನಿಕರ ದೃಷ್ಟಿಯಲ್ಲಿ ಇದೊಂದು ಅಮಾನುಷ ಬಲಿಯಾಗಿ ಕಂಡುಬಂದರೂ ಸತಿ ಹೋದವಳ ತ್ಯಾಗ, ಅವಳ ಬಗೆಗೆ ಜನತೆ ತೋರುತ್ತಿದ್ದ ಗೌರವ ಮುಖ್ಯವಾದುದು. ಬ್ರಿಟಿಷ ಅಧಿಕಾರಿ ವಿಲಿಯಮ್ ಬೆಂಟಿಂಕ್‌ನ ಪ್ರಯತ್ನದಿಂದ ಈ ಪದ್ಧತಿ ಒಂದು ಹತೋಟಿಗೆ ಬಂದಿತಾದರೂ ೧೮ನೆಯ ಶತಮಾನದಲ್ಲಿ ಸೋದರಿಯ ಸಹಗಮನದಿಂದ ನೊಂದುಕೊಂಡ ರಾಜಾರಾಮ ಮೋಹನರಾಯರ ಮನ ಈ ಸಂಪ್ರದಾಯವನ್ನು ನಿಷೇಧಿಸುವವರೆಗೆ ಸಮಾಧಾನಗೊಳ್ಳದೆ

ಹೋಯಿತು. ಈ ಸತಿಪದ್ಧತಿಯನ್ನು ಸಂಪೂರ್ಣವಾಗಿ ಖಂಡಿಸಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ. ಇಂಥ ಪ್ರತಿಭಟನೆಗೆ ಸಿಕ್ಕಿ ಮರೆಯಾದ ಈ ಮೌಲ್ಯ ಇಂದು ಭಾರತೀಯರ ಮನದಾಳದಿಂದ ಸಂಪೂರ್ಣ ಮರೆಯಾಗಿಹೋಗಿದೆ.

ಮಹಾಸತಿಯರ ಸ್ಮಾರಕಗಳಾದ ಮಾಸ್ತಿಕಲ್ಲುಗಳ ಪರಿವೀಕ್ಷಣೆ ಇಂದು ನಡೆದು, ಅವುಗಳ ಕೂಲಂಕಷ ಅಭ್ಯಾಸ ನಡೆಸುವುದು, ಅವುಗಳ ರಕ್ಷಣೆ ಮಾಡುವುದು ನಮ್ಮ ಹೊಣೆಯಾಗಿದೆ. ಎಣ್ಣೆ, ಗಿಣ್ಣೆ, ಕುಂಕುಮಗಳಿಗೆ ಬಲಿಯಾಗಿ, ಪ್ರಕೃತಿಯ ವಿಕೋಪಕ್ಕೆ ಸಿಲುಕಿ, ಎಷ್ಟೋ ಜನರ ಮನೆಗಳಿಗೆ ತಳಗಲ್ಲು- ಮೆಟ್ಟಿಗಲ್ಲುಗಳಾಗಿ ಅನೇಕ ಮಾಸ್ತಿಕಲ್ಲುಗಳು ಮಣ್ಣುಗೂಡುತ್ತಲಿವೆ. ಈ ತಾಯಂದಿರ ಪವಿತ್ರಮಯವಾದ 'ವ್ಯಥೆಯ ಕಥೆ'ಯನ್ನೊಳಗೊಂಡ ಈ ಕಲ್ಲುಗಳನ್ನು ಕಾಯ್ದಿರಿಸಿದಲ್ಲಿ ನಮ್ಮ ಮುಂದಿನ ಜನಾಂಗದಲ್ಲಿ ಅಭಿಮಾನ, ಭಕ್ತಿಗಳನ್ನು ಉಕ್ಕಿಸುತ್ತವೆ.

## ೫. ಮಾದರಿಯ ಕೆಲವು ಮಾಸ್ತಿಕಲ್ಲುಗಳು

೧. ಕ್ರಿ. ಶ. ೯೭೨ ರ ಸೊರಬದ ಒಂದು ಶಾಸನ:

ಶಕವರ್ಷವೆಣ್ಟುನೂಱತೊಂಬತ್ತನಾಲ್ಕನೆಯ ಅಂಗಿರಸೆಂಬ ಸಂವತ್ಸರಂ ಪ್ರವರ್ತಿಸುತ್ತಿರೆ, ಶ್ರೀಮತ್ ಕಕ್ಕಲದೇವ ಪ್ರಿತುವೀರಾಜ್ಯಂಗೆಯೆ ಬನವಸೆಪಂನಿರ್ಚ್ಛಾಸಿರಕೆ ಚಟ್ಟಯ್ಯ ರಾಜ್ಯಂಗೆಯ........ಗರುಂ ಕುಱುವರುಂ ಬಿನಾಕಳ್ಳಿಉರುಗಾಮುಣ್ಡಗೆಯೆ ಕೊಸೆಗೌಡ ಬಿದಿಯಣ್ಣ ಬಿನಾರ.....ತೊಡೆತ.....

ದದರ ಮಗಳ್ ಜಕ್ಕಬ್ಬೆ ಒಡಸತ್ತು ಸುರಲೋಕಕೆಯ್ದಿದ ಜಕ್ಕಬ್ಬೆ ತಂಗೆ ಜಾಬೆ ಕಲ್ಲನಿಱಿಸಿದಲ್ ಎಱಿಗಾರಿಯ ಓಜಂ ಬೆಸಗೆಯ್ದಂ ॥[೬೫]

೨. ಕ್ರಿ. ಶ. ೧೦೫೭ರ ಹೆಗ್ಗಡದೇವನಕೋಟೆಯ ಶಾಸನ:

ಸ್ವಸ್ತಿ ಶ್ರೀಮತು ಸಕಳ ಜ।
ಗಸ್ತುತರವಚೋಗ್ರಗಣ್ಯರೂರ್ಜಿತಪುಣ್ಯರ್।
ವಿಸ್ತಾರಚಾರುವೀರರ।
ಸಸ್ತಿತರಿಱಿವೀಪ ಕಾವ ಸುಗುನಾಡಧಿಪರ್ ॥

ಎನಿಪ ಕುಲದಲ್ಲಿ ಪುಟ್ಟಿದ।
ನನುಪಮಮನೆಱಿಯಂಗನವನ ನಿಜಸುತನೇಚಂ।
ಮನುನಿಭನವಂಗೆ ಪುಟ್ಟಿದ।
ತನೂಭವಂ ಜವನಿಯಮ್ಮ ನಱಿವಿಂಗಾರ್ಮ್ರಂ ॥

ಅನ್ತಾ ಜವನಯ್ಯಂಗಂ।
ಕಾನ್ತಾಜನತಿಲಕಮೆನಿಪ ಜಾಕಬ್ಬೆಗಮೊ।
ಳ್ಪನ್ತಳಿಯೆ ಪುಟ್ಟಿದಂ ರಿಪು।
ಸನ್ತಾನನಗೇನ್ದ್ರವಿಳಯಪವಿಗಂ ರವಿಗಂ ॥

ರವಿಗಂ ಪುಟ್ಟಿಪ ಒಡನು।
ದ್ಭವಮಾಯ್ತುಱಿವಱಿವಿನೊಡನೆ ಪುಟ್ಟಿದುದಾಯಂ।
ಸವಸನ್ಥಾಯದೊಡಂ ಸಂ
ಭವಮಾದುದು ಚಾಗವಿಸ್ತುಟಂ ಬಿರಿದುಂಟೆ ॥

ಕುಡಿಯುರ ವಲ್ಲಭಂ ಕುಡಿಯುರಾಭರಣಂ
ನುಗುನಾಡರಾಮನೆ
ಸ್ಸಡೆ ಕಲಿಕಾಲಕರ್ಣ್ಣನ ವಿನೋದದ ಚಾಗದ
ಬೀರವಾಪರ್
ನೀಗಡಿಸ ಸಿಕ್ಕಸ್ಸಸಿಗುರ್ಣಸಿಕ್ಕತ್ರಸಿರಾಚರಗೀಟಮೀಟರಂ
ಕಡು ಜಡಕಿನ್ನು ಪ್ರೋಲಿಪರೆ ಧನ್ಯನೆನಿಪ್ಪ ಮಚಿಂಗ
ಗಣ್ಯನ ।
ಚೋಳಪಲ್ಲವ ಪಾಣ್ಡ್ಯಸಿಕಾಮೋಘ ಕೇರಳ
ಸೌರಟಗಾ.... ಭೋಜ
ಲಾಳ ಗಜಪತಿ ಹಯಪತಿ ನರಪತಿಯೆನಿಪ ಮಹೀಪಾಳ
ರಾಸ್ತನವತಿ
ಕೋಳತನ್ನನೆನಟವನಿ ಮಾಗಧರ ಕೈಕೊಣ್ಡು
ಪ್ರೊಗಟಿಲ್ಕೆ ನೆಗಱಿ ಬಲ್ಲಂ ।
ನೇಳಮಾಣಿಕನೆನಿಸ ಜಯಂಗೊಣ್ಡ ಚೋಳ
ಪೆಸರ್ಗಡಿಗಾವುಣ್ಡಂ ತಕ್ಕಂ ॥

ಪಲ್ಲವ ಸತ್ತಿಗೆ ಸಂಕಂ ।
ಝಲ್ಲಳಿ ಜಯಮಂಗಳಂಗಳಂ ಚೋಳಮಹೀ ।
ವಲ್ಲಭನಿತ್ತಡೆ ಕುಡಿಯುರ ।
ವಲ್ಲಭನುಱಿ ಮಣ್ಡಳೀಕಪದಮಂ ಪಡೆದಂ ॥

ಕಡಲಕಡೆವರಮುಜಾಣ್ಡದ ।
ಕುಡಿವರ ಮಾಸಾಗಜೇನ ದನ್ತುವರಂ ತತ್ತ ।
ಡನೊಡನೆ ಪರ್ವ್ವಿ ಬಳೆದುದು ।
ಕುಡಿಯುರ ವಲ್ಲಭನ ಕೀರ್ತಿಲತೆ ಕೋಮಳದಿಂ ॥

ಮನುನಿಭನೆಡೆ ನಾಡಧಿಪತಿ ।
ವಿನೇಯನಿಧಿ ಸತ್ಯವಾಕ್ಯ ನಾಲ್ಗ್ರೋಜನ ಮು ।
ಖ್ಯನ ಕುಲವಧು ಬೂತಬ್ಬೆಗೆ ।
ಜನಿಯಿಸಿ ಕಲಿಕಾಲಸೀತೆವೆಸರಂ ಪಡೆದಳ್ ॥

ವನಿತಾರನ್ನಂ ಪೊನ್ನ ।
ಕ್ಕನನಬ್ತಿಯ ಮದುವೆಗೊಣ್ಡ ಬೆಳತೂರಧಿಪಂ ।
ಮನುನಿಭನೆ ನೆಗಬ್ತಿತನ ।
ವನಿತೆಗೆ ಭೂವನಿತೆಯೊಳಗೆ ಪೆಱರೆಣೆಯೊಳರೆ ॥

ನಿರುಪಮಸೀಳದಿಂ ಗುಣದಿನುತ್ತಮದಾನದಿನಾತ್ಮ
ಭಕ್ತಿಯಿಂ ।
ಗಿರಿಸುತೆ ರಂಭೆ, ಮೇನಕಿ, ಸರಸ್ವತಿ, ರುಕ್ಮಿಣಿ,
ಸತ್ಯಭಾಮೆಯೊಳ್ ।
ದೊರೆಯೆನಲೊಲ್ಲದೀ ಗಡಿನ ದುಷ್ಟಕನಿಷ್ಟದುಶೀಳ
ದುರ್ಗುಣಾ ।
ಧರೆಯರನೆನ್ತು ಪೋಲಿಪರೊ ನಿರ್ಮಚಿತ್ತದ
ಪೊನ್ನಕಬ್ಬೆಯಂ ॥

ಚಾರುಚಾರಿತ್ರೆ ನಯವಿನಯಾಕರೆ ಗೋತ್ರಪವಿತ್ರೆ
ಸುಸೀಲಯುಕ್ತೆ ।
ನಾರೀಜನರನ್ನವೆನಿಪ ಪೊನ್ನಬ್ಬೆಗಂ ರವಿಗಂಗಂ
ಪುಟ್ಟಿದ ದೇಕಬ್ಬೆ ।

ಬುರ: ನವಲೆನಾಡಧಿಪತಿ ಕುಱುವನ್ದ್ಗುಲದ
ಪೆರ್ಮಯುಲಾತನೇಚಗೀಂಯೆ ।
ಪಾರಿಜಾನನೆ ವಿನಯುಚಿನಾತ್ತ ಮಣೆ ಪತಿಹಿತೆಮೊಡಗೂಡಿ
ಸುಖದಿಸಿಱ್ದಂ ॥

ಜಟ್ಟಿಗನೆನೆ ನೆಗದ್ದರ್ಪಹಿತಘು ।
ರಟ್ಟಂ ಸುಖಮಿಱ್ದು ತನ್ನ ದಾಯಿಗರ: ತ ।
ಳ್ತೊಟ್ಟಜಿಯಿಸಿಱಿವಡವನಂ ।
ನೆಟ್ಟನೆ ತಲಕಾಡಲುಯ್ದು ಕೊನ್ದು: ನರಪಂ ॥

ಕಲಿಕಾಲವೇಳನೆನಿಸಿವ ।
ಕಲಿಚಾಗಿಯನಿಱಿದು ಕೊಂದರೆಂಬುದ ಮಾತಂ ।
ಲಲಿತಾಂಗಿ ಕೇಳ್ದು ರವಿಗನ ।
ಕುಲದೀಪಕಿ ಸಾಯಲೆಂದು ಕೊಂಡಕೆ ನಡೆದಳ್ ॥

ತನ್ನ ಯುಮಬ್ಬೆಯುಮೊಡನೆಯೆ ॥
ಬನ್ದುಗಳುಂ ಬಂದು ಮಗಳೆ ಸಾಯದೆ ಮಾಣ್ ನೀ
ನೆನ್ದಲ್ಲಿಂ ಕಾಲ್ಪಿಡಿದಡ ।
ನಿನ್ನ ತೆ ದೇಕಬ್ಬೆ ಮುನಿದು ಬಗ್ಗಿಸಿ ನುಡಿದಳ್ ॥

ಸುಗುನಾಡಧಿಪತಿ ರವಿಗನ ।
ಮಗಳಾಗಿಯುಮತೆ ನವಿಲೆನಾಡಧಿಪತಿಗಾಂ ।
ನೆಗಳೆ ಸತಿಯಾಗಿ ಬಾಱ್ದಿದು ।
ಬಗೆದರ್ಪೆನೆ ಕೊಟ್ಟಕೊಣ್ಡು ಮನೆಯೆಸಮುಱಿಯಲ್ ॥

ಎಂದು ಪರಿಚ್ಛೇದಿಸಿ ನಯ।
ದಿಂದಂ ದೇವಂಗೆ ತೋಂಟ ಖಣ್ಡದ ಮಣ್ಣಂ।
ನಂದಾದೀವಿಗೆಗಿತ್ತರ।
ವಿಂದಾನನೆ ಸಲೆ ಸಿವೇದ್ಯಕೆಂದನುನಯದಿಂ॥

ಮಡದಿ ಸಲೆಗೇಳಿ ಗಬ್ಬಯ।
ಪಡುವಣ ಕಡೆಯಲ್ಲೀ ತೆಂಕಲಯ್ಗೊಳ ಬೆದೆಯಂ।
ಕಡುಗೂತ್ತುರ್ಗೊಟ್ಟ ನುಗುನಾ।
ಡೊಡೆಯನ ಕುಲಪುತ್ರಿ ಪೆಜ್ಜಿ ಮತ್ತಂ ಮತ್ತಂ॥

ನೆರೆದೆಲ್ಲಂ ಬೇಡ ಮಾಣೆಂದಡೆ ನುಡಿಯದಿಂ
ಪೋಗಿವಾ ಮಾಣೆನೆಂದಾ
ದರದಿಂದಂ ಭೂಮಿ ಪೊನ್ ಪುಟ್ಟಗೆ ಪಶುಧನಮಂ
ಧನಮಂ ನೀಡುತುಂ ದೇ
ಪರದೇವಂಗಬ್ಬಿಯಿಂ ಕಯ್ಮುಗಿದುರಿವುರಿಯಂ
ಪೊಕ್ಕು ದೇಕಬ್ಬೆ ತನ್ನಂ।
ಧರೆಯೆಲ್ಲಂ ಮೆಚ್ಚಿ ನಿಚ್ಚಂ ಪೊಗಳೆ ನೆಗಳ್ದಿತಂ
ದೇವಲೋಕಕ್ಕೆ ಪೋದಳ್।

ಶ್ರೀರಮಣಿಗೌರಿಶಚಿಧಾರಿಣಿಯಪುತ್ರಿ ರತಿಭೂರಮಣಿಯಂಪಪ
ಸ್ವರೂಪವರಿವೊಳ್ಪಾ।
ದಾರೆ ಜಯವಾರೆ ಜಸಧಾರೆ ನಯಧಾರೆ ಭಯಹಾರೆ ಪತಿಭಕ್ತಿ
ಧೃತಶಕ್ತಿಯೆನೆ ಸಂನಿ।

ಸೀರಸಿಥಿಯುಂ ಚಲದ ವಾರಿಸಿಥಿಯುಂ ಗುಣದ ಚಾರುಸಿಥಿಯುಂ
ನೆಗಳ್ದ ದೇಕಲೆಯುಮಿಂತೀ
ನಾರಿಜನಕ್ಕಮನದಾರೊ ಮಱೆವರ್ ಸಕಳಧಾರಿಣಿ
ಯೊಳೆಂತು ನರಕಾಂತೆ ದೊರೆಯಾವಳ್ ॥

ಪಂಡಿತಾಶ್ರಯಂ ಸುಗುಣಾಡರಾಘವಂ ಮುನಿವರ ಸಿಂಗ
ಮಾಚಕದಾವಳಂ ।
ಚಣ್ಡವಿಕ್ರಮಂ ಕುಡಿಯರ ವಲ್ಲಭಂ ಕಲಿಕಾಲಕರ್ಣ
ಮಚ್ಚರಿಪವರ ।
ಗಣ್ಡಂ ವನ್ದಿಚಿನ್ತಾಮಣಿ ಶಿವಪಾದಶೇಖರಂ ನಿಜಸುತೆ
ಗನುರಾಗದಿಂ ।
ಮಣ್ಡಲಕ್ಕೆಲ್ಲ ಪಡಿಭನ್ದವಾಗೆ ಶಿಲಾಸ್ತಂಭ ಶಾಸನ
ಮಾಗೆ ನಟ್ಟಂ ॥

ಶ್ರೀ ದೇಕಬ್ಬೆ ಮಹಾದೇವರ್ಗೆ ಬಿಟ್ಟ ಪೊಂಬೊಲಂ
ತೋಂಟಖಣ್ಡ
ಮುಮಂ ಸಿವಾರ್ಪ್ರಣ ಮುಱ್ತಿ ಕೆಱೆಯುಂ
ತೆಂಕಣ ಕಡೆಯಲ್
ಅಯ್ದುಕೊಳಗ ಗಱ್ದೆಯುಮಂ ಈ ವಂಸದಲಿ
ಪುಟ್ಟಿದವರ್
ಕಾದಿಸುಗೆ ಸಲಿಸದವರ್ ನರಕಭಾಜನರಪ್ಪರ್ ॥

ಮಱುಪರಚಕ್ರಂ ದ್ವಿಜರೊಳ್
ಕಱಿಮಱಿಯಿಲ್ಲೆನಿಪ ಕುಱುಬನಾದಿತ್ಯಂ ಸನ್ದ
ಱಕೆಯುವಗಾದಮಲ್ಲಂ
ಜಱುಚದ ಕವಿರಾಜ ಬಾನ್ಧವಂ ಒರೆದಸಿದಂ ॥

ಕಣ್ಡರಿಸಿದಂ ಮುನಿವರ ಸಿಂಗಾಚಾರಿಯುಂ ಮಚ್ಚರಿಪರಗಣ್ಡಾಚಾರಿಯು ॥[೬೬]

ಕ್ರಿ. ಶ. ೧೧೫೦ರ ಚಿಕ್ಕಮಗಳೂರ ಶಾಸನ:

ಸ್ವಸ್ತಿ ಸಕವರಿಷ ೧೦೭೩ ಸುಕುಲಸಂವತ್ಸರದ ಪೌಷ್ಯ ಮಾಸ ವಡ್ಡವಾರದನ್ದು ಶ್ರೀ ಮನ್ಮಹಾಪ್ರಧಾನ ಸೇನಾಧಿಪತಿ ಹಿರೆಯ ಹಡವಳ ಬೋಕಯನ ಹಡವಳ್ತಿ ಕನಕವ್ವೆಯರು ದೋರ ಸಮುದ್ರದಲ್ಲು ಕಾಲಂಗೆಯ್ಯಲು ತಳಿಯಕುನ್ದದ ಬೀಡಿನ ಹುಟ್ಟ ಗೊರೆನೆಯನಾಯಕಂ ಮೆರವಳಿಯುಲು ತನ್ನ ಮದವಳಿಗೆ ಬಮ್ಮಕ್ಕನು ಸತ್ತು ಸುರಲೋಕಪ್ರಾಪ್ತರಾದರು ॥ ಆತನ ಪುತ್ರ ಮಲ್ಲಿಯಂ ಕಲ್ಲಂ ಮಾಡಿಸಿದ ॥[೬೭]

ಕ್ರಿ. ಶ. ೧೩೮೨ರ ಹಿರೇಕೆರೂರ ಶಾಸನ:

ಶ್ರೀಮತು ಸಕ ೧೩೦೪ನೆಯ ದುಂದುಭಿಸಂವತ್ಸರದ ಕಾರ್ತಿಕ ಬ. ೨ ಬುಧವಾರ ಹನುಬರ ನಂನಿಯ ಕೇತಗೊಂಡನ ಮಗ ಬೊಂಮಯನು ಸತ್ತಂ। ಆತನ ಹೆಂಡತಿ ಕಾಮಾಯಿ ಕಿಚ ಹಾದಲಿ ಆ ಕೇತಗೊಂಡನು ಅವರ ಯಿಬ್ಬರ ಹೆಸರಲಿ ಕಲ್ಲ ಕಟಿಸಿ ನಿಲಿಸಿದನು ಮಂಗಳಮಹಾ ಶ್ರೀ ॥[೬೮]

ಕ್ರಿ. ಶ. ೧೪೧೦ರ ಸಾಗರದ ಶಾಸನ.

ಸಕವರುಷ ೧೩೩೨ನೆಯ ವಿರೋಧಿ ಸಂವತ್ಸರದ ಫಾಲ್ಗುಣ ಸುದ್ಧ ೭ ಆ ದೇವರಾಯನು ರಾಜ್ಯವನಾಳುವ ಕಾಲದಲಿ ಬೀರೂರ ಬೋಮಗವುಡನ ಮಗನು ಮಾದಪ್ಪನು ಸ್ವರ್ಗಸ್ತನಾದನು ಆತನ ಮದವಳಿಗೆ ಮಸಣಕ್ಕ ಸಹಗಮನವ ಮಾಡಿದಳು.[೬೯]

# ಅಡಿಟಿಪ್ಪಣಿಗಳು

೧ ಶಾಸನ ವ್ಯಾಸಂಗ ಭಾಗ I
೨ S. I. I. ix i ೯ ಕ್ರಿ. ಶ. ೯೦೦
೩ K. I. v ತಿಳವಳ್ಳಿ ೯೭ ಕ್ರಿ. ಶ. ೧೧೪೧
೪ Ec. vii ಶಿಕಾರಿಪುರ ೧೩೬ ಕ್ರಿ. ಶ. ೧೦೬೮
೫ ಸಮಯ ಪರೀಕ್ಷೆ ಅನು. ೧; ೧೨: ೨೯
೬ Ec. III ತಿರುಮಲಕೂಡು ನರಸೀಪುರ ೯೧. ಕ್ರಿ.ಶ. ೯೨೧
೭ I. A. xx ಪುಟ ೬೯ ಕ್ರಿ. ಶ. ೯೦೦
೮ Ec. v ಬೇಲೂರು ೧೧೨. ಕ್ರಿ. ಶ. ೧೨೨೦
೯ ಅನಂತನಾಥ ಪುರಾಣ ೧೨; ೧೧
೧೦ ಸಂಭಾವನೆ ಪು. ೧೬೪
೧೧ Ec. vii ಶಿಕಾರಿಪುರ ೬೦ ಕ್ರಿ. ಶ. ೧೧೧೫
೧೨ ಗದಾಯುದ್ಧ ೨; ೩೧
೧೩ ಕುಮಾರವ್ಯಾಸ ಭಾರತ ವಿರಾಟಪರ್ವ ಪದ್ಯ ೨೦
೧೪ K. I. I. ೮ ಕ್ರಿ. ಶ. ೭೫೦
೧೫ ವಿವೇಕ ಚಿಂತಾಮಣಿ ೮; ೨೧೨. [ಪು.]
೧೬ M. A. R. ೧೯೩೭ No. ೯
೧೭ ಪಂಪಭಾರತ ೧೦; ೪೪
೧೮ E. C. iv ಹೆಗ್ಗಡದೇವನಕೋಟೆ ೧೮ ಕ್ರಿ.ಶ. ೧೦೫೭
೧೯ E. C. viii ಸೊರಬ ೫೨೩ ಕ್ರಿ. ಶ. ೪೦೦
೨೦ S. I. I. ix i ೫೬ ಕ್ರಿ. ಶ. ೯೦೮
೨೧ E. C. vi ಚಿಕ್ಕಮಗಳೂರ ೬೬ ಕ್ರಿ. ಶ. ೧೦೯೦

೨೨ E. C. iv ಹೆಗ್ಗಡದೇವನಕೋಟೆ ೧೮ ಕ್ರಿ. ಶ. ೧೦೩೭
೨೩ E. I. vi p. ೨೧೫
೨೪ E. C. iv ಹೆಗ್ಗಡದೇವನಕೋಟೆ ೧೦೦ ಕ್ರಿ. ಶ. ೧೦೮೮
೨೫ E. C. iv ನಾಗಮಂಗಲ ೯೬ ಕ್ರಿ. ಶ. ೧೧೫೦
೨೬ E. C. vii ಶಿವಮೊಗ್ಗಾ ೬೧ ಕ್ರಿ. ಶ. ೧೨೮೬
೨೭ E. C. viii ಸೊರಬ ೧೦೪ ಕ್ರಿ. ಶ. ೧೩೫೪
೨೮ E. C. viii ಸೊರಬ ೧೦೬ ಕ್ರಿ. ಶ. ೧೩೭೬
೨೯ E. C. viii ಸೊರಬ ೪೮೩ ಕ್ರಿ. ಶ. ೧೩೮೮
೩೦ E. C viii ಸಾಗರ ೮ ಕ್ರಿ. ಶ. ೧೪೧೦
೩೧ E. C. iii ಮಂಡ್ಯ ೧೦೩ ಕ್ರಿ. ಶ. ೧೪೧೭
೩೨ E. C. vii ಶಿವಮೊಗ್ಗಾ ೩೨ ಕ್ರಿ. ಶ. ೧೨೦೫
೩೩ ಪ್ರವಾಸಿ ಕಂಡ ಇಂಡಿಯಾ ಭಾಗ II
೩೪ E. C. viii ಸೊರಬ ೧೬೫ ಕ್ರಿ. ಶ. ೧೫೦೯
೩೫ E. C. iv ನಾಗಮಂಗಲ ೯೬ ಕ್ರಿ. ಶ.
೩೬ ವಿಕ್ರಮಾರ್ಜುನ ವಿಜಯು ೨; ೨೬
೩೭ ಅಜಿತಪುರಾಣ ಸಂಗ್ರಹ ೧; ೨೧
೩೮ ಅಖಂಡೇಶ್ವರ ವಚನ ಪು. ೧೧೯. ಪ. ೧೩೮
೩೯ ಅನಂತನಾಥ ಪುರಾಣ ೧೨; ೧೨
೪೦ ರಾಮನಾಥ ಚರಿತೆ ಭಾಗ II, ಶರಣಸಾಹಿತ್ಯ ಸಂ. ೧೦ ಸಂ. ೫
೪೧ ಸಿದ್ಧೇಶ್ವರ ಪುರಾಣ ೧೨; ೩೫, ೩೬
೪೨ ತೋಂಟದ ರಾಯನ ಸಾಂಗತ್ಯ ಅಪ್ರಕಟಿತ
೪೩ ಜಾನಪದ ಖಂಡ ಕಾವ್ಯ ಜೀ ಶಂ. ಪ.
೪೪ ಜಾನಪದ ಖಂಡ ಕಾವ್ಯ ಜೀ ಶಂ. ಪ.
೪೫ ಜಾನಪದ ಖಂಡ ಕಾವ್ಯ ಜೀ ಶಂ. ಪ.
೪೬ ಲಾವಣಿಗಳು—ಬೆಂಗಳೂರ ವಿಶ್ವವಿದ್ಯಾಲಯದಿಂದ ಪ್ರಕಟಿತ.
೪೭ ಸುಧಾ ವಾರಪತ್ರಿಕೆ ಸಂ. ೧೨. ಸಂ. ೩೧

೪೮ ಬಯಲು ಸೀಮೆಯ ಲಾವಣಿಗಳು ಕಾಳೇಗೌಡ ನಾಗವಾರ
೪೯ ಪ್ರವಾಸಿ ಕಂಡ ಇಂಡಿಯಾ ಭಾಗ I ಪು. ೭೬
೫೦ ಪ್ರವಾಸಿ ಕಂಡ ಇಂಡಿಯಾ ಭಾಗ II ಪು. ೫೫
೫೧ ಪ್ರವಾಸಿ ಕಂಡ ಇಂಡಿಯಾ ಭಾಗ II ಪು. ೭೫
೫೨ ಪ್ರವಾಸಿ ಕಂಡ ಇಂಡಿಯಾ ಭಾಗ II ಪು. ೭೫
೫೩ ಪ್ರವಾಸಿ ಕಂಡ ಇಂಡಿಯಾ ಭಾಗ II ಪು. ೨೯೫, ೯೬,
೫೪ ಸಮಯ ಪರೀಕ್ಷೆ ೧೨; ೨೮
೫೫ ಸಮಯ ಪರೀಕ್ಷೆ ೧೪; ೧೯
೫೬ ಮಾತನಾಡುವ ಕಲ್ಲು [ಕಂಕಣದ ಕೈ] —ಬೆಟಗೇರಿ ಕೃಷ್ಣಶರ್ಮ
೫೭ E. C. viii ಸೊರಬ ೪೫೭ ಕ್ರಿ. ಶ. ೯೭೨
೫೮ M. A. R. ೧೯೨೦ p. ೪೨
೫೯ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು
ಚಿದಾನಂದಮೂರ್ತಿ ಪು. ೩೪
೬೦ K. I. iv ಹಿರೇಕೆರೂರ ೫೧ ಕ್ರಿ. ಶ. ೧೩೮೨
೬೧ E. C. viii ಸಾಗರ ೮ ಕ್ರಿ. ಶ. ೧೪೧೦
೬೨ ಸಂಭಾವನೆ ಪು. ೬೭
೬೩ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು
ಚಿದಾನಂದಮೂರ್ತಿ ಪು. ೩೪
೬೪ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು
ಚಿದಾನಂದಮೂರ್ತಿ ಪು. ೩೪
೬೫ E. C. viii ಸೊರಬ ೪೫೭ ಕ್ರಿ. ಶ. ೯೭೨
೬೬ E. C. iv ಹೆಗ್ಗಡದೇವನಕೋಟೆ ೧೮ ಕ್ರಿ. ಶ. ೧೦೫೭
೬೭ E. C. vi ಚಿಕ್ಕಮಗಳೂರು ೬೬ ಕ್ರಿ. ಶ. ೧೧೫೦
೬೮ K. I. iv ಹಿರೇಕೆರೂರು ೫೧ ಕ್ರಿ. ಶ. ೧೩೮೨
೬೯ E. C. viii ಸಾಗರ ೮ ಕ್ರಿ. ಶ. ೧೪೧೦

## ಉಪನ್ಯಾಸ ಗ್ರಂಥಮಾಲೆಯ
## ಇತ್ತೀಚಿನ ಪ್ರಕಟನೆಗಳು
### ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

೧ ಗ್ರಂಥಾಲಯದ ಅಂದು-ಇಂದು
—ಎಸ್. ಆರ್. ಗುಂಜಾಳ

೨ ಮಾನವನ ಸೇವೆಯಲ್ಲಿ ಪರಮಾಣು ಶಕ್ತಿ
—ಎಸ್. ಸಿ. ಗಲಗಲಿ

೩ ರಾಯಚೂರು ಜಿಲ್ಲೆಯ ಆರ್ಥಿಕಾಭಿವೃದ್ಧಿಯಲ್ಲಿ ತುಂಗಭದ್ರಾ ಯೋಜನೆಯ ಪಾತ್ರ
—ಕೆ. ಮಾರ್ಕಂಡಪ್ಪ

೪ ಭಕ್ತ ಸೂರದಾಸ —ಬಸವರಾಜ ಅಮ್ಮಣಗಿ

೫ ಹಳ್ಳಿಗಳಲ್ಲಿ ಸಾಲದ ಸೌಲಭ್ಯ ಹಾಗೂ ಅದರ ಸಮಸ್ಯೆಗಳು —ಎಸ್. ಬಿ. ದುರಗಿ

೬ ಶಿವಶರಣರ ಸಮನ್ವಯ ಯೋಗ
—ಪಂ. ನಾ. ಮ. ದೊಡ್ಡಯ್ಯ ಶಾಸ್ತ್ರಿ

---

ಪ್ರಸಾರಾಂಗ ವಿಸ್ತರಣ-ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩